WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಜುಲೈ ೧೨, ೨೦೧೨ (ಆಷಾಢ ೨೧, ಶಕ ವರ್ಷ ೧೯೩೪) | ಸಂಚಿಕೆ ೨೮ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಲೋಇ 109 ಸೇಸಕಿ 12, ಬೆಂಗಳೂರು, ದಿನಾಂಕ : 09–05–2012**

ಸರ್ಕಾರದ ಅಧಿಸೂಚನೆ ಸಂಖ್ಯೆ : ಲೋಇ:98:ಸೇಸಕಿ:08, ದಿನಾಂಕ: 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ನಾರಾಯಣ ಎಂ. ಭಗವಂತಿ, ಸಹಾಯಕ ಇಂಜಿನಿಯರ್ ಇವರ ಜೇಷ್ಠತೆಯನ್ನು 3234ಕ್ಕೆ ಬದಲಾಗಿ 3235–A ಎಂದು ತಿದ್ದುಪಡಿ ಮಾಡಿ ಕೆಳಕಂಡಂತೆ ನಿಗದಿಪಡಿಸಿದೆ.

| Ranking No. | Provious AE.GRD No. | Name of the Engineer | SC/ST | Date of Birth | Date of Entry into Service | Date of Regular Appointment to the cadre | Remarks |
|---|---|---|---|---|---|---|---|
| 3235-A | 6527 | NARAYAN M. BHAGAVANTHI | | 24-MAR-1960 | 06-Apr-1984 | 06-Apr-1994 | DWR* |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಆರ್. ಮೋಹನ್‌ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ(ಸೇವೆಗಳು–ಬಿ)

**ಪಿ.ಆರ್. 686**

### ನಿರ್ದೇಶನಾಲಯ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಂಗಳೂರು–1

**ಅಧಿಸೂಚನೆ**

**ಸಂಖ್ಯೆ : ವಿನಿ/ಸಿಶಾ/ಮುಂಬಡ್ತಿ/181/2012–13, ದಿನಾಂಕ : 11–05–2012**

ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ಈ ಕೆಳಕಂಡ ಅಧೀಕ್ಷಕರುಗಳಿಗೆ ರೂ. 22800–600–24600–700–28800–800–33600–900–39000–1050–43200 ವೇತನ ಶ್ರೇಣಿಯಲ್ಲಿ ಸಹಾಯಕ ನಿರ್ದೇಶಕರು/ಜಿಲ್ಲಾ ವಿಮಾಧಿಕಾರಿಗಳ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರ ಹೆಸರಿನ ಮುಂದೆ ನಮೂದಿಸಿರುವ ಸ್ಥಳಕ್ಕೆ ನೇಮಿಸಿದೆ.

| ಕ್ರಮ ಸಂಖ್ಯೆ | ಹೆಸರು ಹಾಗೂ ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆ ಮತ್ತು ಕಛೇರಿ ಶ್ರೀಯುತರು | ಮುಂಬಡ್ತಿಯ ನಂತರ ನೇಮಿಸಲಾದ ಹುದ್ದೆ, ಕಛೇರಿ ಮತ್ತು ಸ್ಥಳ |
|---|---|---|
| 1 | ಎ.ಕೆ. ರಮೇಶ್, ಅಧೀಕ್ಷಕರು, ಜಿಲ್ಲಾ ವಿಮಾ ಕಛೇರಿ, ಮಡಿಕೇರಿ | ಜಿಲ್ಲಾ ವಿಮಾಧಿಕಾರಿ, ಜಿಲ್ಲಾ ವಿಮಾ ಕಛೇರಿ, ಮಡಿಕೇರಿ |
| 2 | ಮೋಹನ, ಅಧೀಕ್ಷಕರು, ಜಿಲ್ಲಾ ವಿಮಾ ಕಛೇರಿ, ರಾಮನಗರ | ಜಿಲ್ಲಾ ವಿಮಾಧಿಕಾರಿ, ಜಿಲ್ಲಾ ವಿಮಾ ಕಛೇರಿ, ರಾಮನಗರ |
| 3 | ಡಿ.ವಿ. ನೀರಲಗಿ, ಅಧೀಕ್ಷಕರು, ಜಿಲ್ಲಾ ವಿಮಾ ಕಛೇರಿ, ಹಾವೇರಿ | ಜಿಲ್ಲಾ ವಿಮಾಧಿಕಾರಿ, ಜಿಲ್ಲಾ ವಿಮಾ ಕಛೇರಿ, ಹಾವೇರಿ |
| 4 | ಹೆಚ್.ಸಿ. ಲಕ್ಷ್ಮೀಕಾಂತನ್, ಅಧೀಕ್ಷಕರು, ಜಿಲ್ಲಾ ವಿಮಾ ಕಛೇರಿ, ತುಮಕೂರು | ಜಿಲ್ಲಾ ವಿಮಾಧಿಕಾರಿ, ಜಿಲ್ಲಾ ವಿಮಾ ಕಛೇರಿ, ತುಮಕೂರು |

ನಿರ್ದೇಶಕರು,
ವಿಮಾ ಇಲಾಖೆ

**ಪಿ.ಆರ್. 688**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟಪರಿಹಾರ ಕಾಯ್ದೆಯಡಿ ಆಯುಕ್ತರು ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ

### ಪ್ರಕಟಣೆ

**ಸಂಖ್ಯೆ : ಕಾಅಗ/ಕಾನಪ/ಎಫ್–22/2012/90, ದಿನಾಂಕ 10ನೇ ಮೇ 2012**

**ಅರ್ಜಿದಾರರು :–**

1) ಶ್ರೀಮತಿ ರೋಶನ್‌ಬಾನು W/o ಅಬ್ದುಲ್ ರೆಹಮಾನ, ಸುರಪುರ
2) ಕು॥ ಇಮ್ರಾನ್ ತಂದೆ: ಅಬ್ದುಲ್ ರೆಹಮಾನ, ಸುರಪುರ
3) ಮಹಬೂಬಸಾಬ ತಂದೆ: ಅಹ್ಮದಸಾಬ, ಸುರಪುರ
4) ಅಮೀನಬಿ ಕೊಂ: ಮಹಬೂಬಸಾಬ, ಸುರಪುರ
ಇವರೆಲ್ಲರ ವಿಳಾಸ :
ಸಾ॥ ಗಜೇಂದ್ರಗಡ, ತಾ॥ ರೋಣ, ಜಿಲ್ಲೆ॥ ಗದಗ

**ವಿರುದ್ಧ**

**ಪ್ರತಿವಾದಿಗಳು :–**

1) ಮರ್ತುಜಾಸಾಬ ಶಮೀನಾಸಾಬ ಮೂಲಿಮನಿ, ಸಾ॥ ಕಂದಗಲ್, ತಾ॥ ಹುನಗುಂದ
2) ದಿ ಬ್ರಾಂಚ್ ಮ್ಯಾನೇಜರ್, ರಿಲಾಯನ್ಸ್ ಜನರಲ್ ಇನ್ಶೂರೆನ್ಸ್ ಕಂ. ಲಿ., CTS # 472–474, VA ಕಲಬುರ್ಗಿ ಸ್ಕ್ವೇರ್, ದೇಸಾಯಿ ಕ್ರಾಸ್, ದೇಶಪಾಂಡೆ ನಗರ, ಹುಬ್ಬಳ್ಳಿ–29

ಅರ್ಜಿದಾರರಾದ 1) ಶ್ರೀಮತಿ ರೋಶನ್‌ಬಾನು ಕೋಂ ಅಬ್ದುಲ್ ರೆಹಮಾನ, ಸುರಪುರ 2) ಇಮ್ರಾನ್ S/o ಅಬ್ದುಲ್ ರೆಹಮಾನ, ಸುರಪುರ 3) ಮಹಬೂಬಸಾಬ S/o ಅಹ್ಮದಸಾಬ, ಸುರಪುರ 4) ಅಮೀನಬಿ ಕೊಂ: ಮಹಬೂಬಸಾಬ, ಸುರಪುರ, ಸಾ॥ ಗಜೇಂದ್ರಗಡ, ತಾ॥ ರೋಣ, ಜಿಲ್ಲೆ॥ ಗದಗ ಇವರು ತಾವು ಮೃತ ಅಬ್ದುಲ್ ರೆಹಮಾನ ಸಾಬ, ಸುರಪುರ ಇವರ ಹೆಂಡತಿ ಮತ್ತು ಮಗ ಹಾಗೂ ತಂದೆ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಅಬ್ದುಲ್ ರೆಹಮಾನ ಸಾಬ, ಸುರಪುರ ಇವರು ಒಂದನೇ ಪ್ರತಿವಾದಿಗಳಾದ ಮರ್ತುಜಾಸಾಬ ಶಮೀನಾಸಾಬ ಮೂಲಿಮನಿ, ಸಾ॥ ಕಂದಗಲ್, ತಾ॥ ಹುನಗುಂದ ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ,
ಗದಗ ಜಿಲ್ಲೆ ಗದಗ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು.

**ಪಿಆರ್. 691**

## ಜಿಲ್ಲಾಧಿಕಾರಿಗಳ ಕಛೇರಿ, ಮೈಸೂರು ಜಿಲ್ಲೆ, ಮೈಸೂರು

### ನಮೂನೆ 27

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

**ಸರ್ಕಾರದ ಪತ್ರ ಸಂಖ್ಯೆ : ಆರ್.ಡಿ. 104 ಎಲ್‌ಜಿಎಂ 2010, ದಿನಾಂಕ : 11–08–2011ರಂತೆ ಅನುಮೋದನೆ ದೊರಕಿದೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ನಾಲಾ ಖರಾಬಿನ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಈಗ, ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ನಾಲಾ ಖರಾಬಿನ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಕಟ್ಟೆಯ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ನಾಲಾ ಖರಾಬಿನ ಹಕ್ಕಿನ ಜೊತೆಗೆ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತೀಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು, ಈ ಅಧಿಸೂಚನೆಯನ್ನು ಹೊರಡಿಸಿದ ತೊಂಭತ್ತು ದಿನಗಳೊಳಗೆ ಸದರೀ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು, ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು, ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯುಟಿ ಕಮೀಷನರನಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೇಮುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯುಟಿ ಕಮೀಷನರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಕಟ್ಟೆಯ ಭಾಗ ಇತ್ಯಾದಿ ಇರುವ ಗ್ರಾಮಗಳು | ಲಲಿತಾದ್ರಿಪುರ |
| ತಾಲ್ಲೋಕುಗಳು | ಮೈಸೂರು |
| ಜಿಲ್ಲೆ | ಮೈಸೂರು |
| ಕಟ್ಟೆಯ ಮೊದಲಾದುದರ ಭಾಗ ಅಥವ ಭಾಗಗಳ ವರ್ಣನೆ | ಲಲಿತಾದ್ರಿಪುರ ಸ.ನಂ. 44,47,48,56,57,58,60 ಹಾಗೂ 67 |
| ಕಟ್ಟೆಯ ಭಾಗ ಅಥವಾ ಭಾಗಗಳ ಸರಿ ಸುಮಾರು ವಿಸ್ತೀರ್ಣ | 6.30 ಎಕರೆ |
| **ಮೇರೆ** | |
| ಪೂರ್ವಕ್ಕೆ : | ಸ.ನಂ. 44, 60, 58, 59 ಹಾಗೂ 67ರ ಉಳಿಕೆ ಜಮೀನುಗಳು |
| ಪಶ್ಚಿಮಕ್ಕೆ : | ಸ.ನಂ. 51, 57, 68, 67ರ ಉಳಿಕೆ ಜಮೀನುಗಳು |
| ಉತ್ತರಕ್ಕೆ : | ಸ.ನಂ. 48, 47 ರ ಉಳಿಕೆ ಜಮೀನುಗಳು |
| ದಕ್ಷಿಣಕ್ಕೆ : | ನಾಲೆಯ ಭಾಗ |
| ಸಾರ್ವಜನಿಕ ಕಟ್ಟೆ ಅಥವಾ ಅದರ ಭಾಗ | ಲಲಿತಾದ್ರಿಪುರ ಸ.ನಂ. 44,47,48,56,57,58,60 ಹಾಗೂ 67ರ ನಾಲಾ ಖರಾಬಿನ 6.30 ಎಕರೆ ಜಮೀನು |

**ಜಿಲ್ಲಾಧಿಕಾರಿಗಳ ಪರವಾಗಿ,**
**ಮೈಸೂರು ಜಿಲ್ಲೆ, ಮೈಸೂರು**

**ಪಿ.ಆರ್. 696**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ನ್ಯಾಯಾಲಯದಲ್ಲಿ

**ಪ್ರಕಟಣೆ**

**ಸಂಖ್ಯೆ : ಡಬ್ಲ್ಯೂಸಿಎ/ಎಫ್‌ಸಿಆರ್-8/2012-13, ದಿನಾಂಕ**

**ಅರ್ಜಿದಾರರು :-** ವಿರುದ್ಧ **ಪ್ರತಿವಾದಿಗಳು :-**

ಶ್ರೀಮತಿ ಭಾಗ್ಯ ಉರ್ಫ ಬಸಮ್ಮಾ ಕೋಂ.
ಮಾರುತಿ ಕದರ್ ಮಂಡಲಗಿ,
ಕುರುಬಗೇರಿ ಬೀದಿ, ಕುದುರೆಯವರ ಓಣಿ,
ಬೀರೇಶ್ವರ ದೇವಸ್ಥಾನದ ಹತ್ತಿರ,
ರಾಣೀಬೆನ್ನೂರು, ಜಿಲ್ಲೆ ಹಾವೇರಿ

1) ಅಧೀಕ್ಷಕ ಇಂಜಿನೀಯರ್ (ವಿ) ಹುಬ್ಬಳ್ಳಿ ವಿದ್ಯುತ್ ಕಂಪನಿ
ಸರಬರಾಜು ನಿಯಮಿತ ಕಾರ್ಯ ಮತ್ತು ಪಾಲನಾ ವೃತ್ತ
ಬಿಲ್ಡಿಂಗ್ ಸಂಖ್ಯೆ : 258/2, ಅಯ್ಯಪ್ಪಾ ನಗರ,
ಹುಬ್ಬಳ್ಳಿ ರಸ್ತೆ, ಶಿರಸಿ (ಉ.ಕ.) 581 401

ಶ್ರೀಮತಿ/ಶ್ರೀ ಸಂಜೀವ್ ಕದರ ಮಂಡಲಗಿ, ಸಹಾಯಕ ಮಾರ್ಗದಾಳು ಇವರ ಮರಣದ ಪ್ರಯುಕ್ತ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಮೃತ ಸಂಜೀವ್ ಕದರ ಮಂಡಲಗಿ, ಇವರು ಪ್ರತಿವಾದಿಗಳಾದ ಹುಬ್ಬಳ್ಳಿ ವಿದ್ಯುತ್ ಕಂಪನಿ ಸರಬರಾಜು ನಿಯಮಿತ ಶಿರಸಿ ವಿಭಾಗ ಹಳಿಯಾಳ ಉಪ ವಿಭಾಗದಲ್ಲಿ ಸಹಾಯಕ ಮಾರ್ಗದಾಳು ಎಂದು ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ವಿದ್ಯುತ್ ಅಪಘಾತದಲ್ಲಿ ಮರಣ ಹೊಂದಿದ್ದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ.

ಈ ಸಂಬಂಧ, ಸಂಬಂಧಪಟ್ಟವರಿಗೆ ಹಾಗೂ ಸಾರ್ವಜನಿಕರಿಗೆ ಈ ಪ್ರಕಟಣೆಯ ಮೂಲಕ ತಿಳಿಸುವುದೇನೆಂದರೆ, ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಇಲ್ಲವೇ ಬೇರೆ ಶಾಸನಬದ್ಧ ವಾರಸುದಾರರೆಂದು ಪರಿಗಣಿಸಬೇಕೆಂದು ಇಚ್ಛಿಸಿದಲ್ಲಿ, ಅಂತಹವರು ಈ ಪ್ರಕಟಣೆಯು ಪ್ರಕಟವಾದ 30 ದಿನಗಳೊಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಶ್ರೀ ನಾಗರಾಜ ಎಚ್.ಎಮ್.**
ಕಾರ್ಮಿಕ ಅಧಿಕಾರಿ, ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉತ್ತರ ಕನ್ನಡ ಜಿಲ್ಲೆ, ಕಾರವಾರ

**ಪಿಆರ್. 697**

## ವಾಣಿಜ್ಯ ತೆರಿಗೆಗಳ ಇಲಾಖೆ

### ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಎಲ್.ವಿ.ಓ–020) ಬೆಂಗಳೂರು, ರವರ ನಡವಳಿಗಳು

**ಪ್ರಸ್ತುತ : ಪುಷ್ಪ,** ಸಿ. ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಎಲ್.ವಿ.ಓ.–020, ಬೆಂಗಳೂರು

**ವಿಷಯ :** ಮೆ॥ ಏಟ್ರಿಯಾ ಬೃಂದಾವನ್ ಪವರ್ ಲಿ., ಬೆಂಗಳೂರು ಟಿನ್ ಸಂಖ್ಯೆ : 29330202803 ಇವರಿಗೆ ನಕಲಿ 'ಸಿ' ನಮೂನೆಯನ್ನು ನೀಡುವ ಬಗ್ಗೆ

**ಉಲ್ಲೇಖ :**
1) ವರ್ತಕರ ಮನವಿ ಪತ್ರ ದಿನಾಂಕ: 23–02–2012
2) ಈ ಕಛೇರಿ ಪತ್ರ ಸಂಖ್ಯೆ ವಾತೆಸಆ. ಎಲ್.ವಿ.ಓ–020–842/2011–12, ದಿನಾಂಕ: 24–02–2012
3) ವಾತೆಜಂಆ(ಆ) ಮೌ.ತ.ವಿ–1, ಬೆಂಗಳೂರು ಇವರ ಪತ್ರ ಸಂಖ್ಯೆ : ಸಿಆರ್.1575/11–12, ದಿನಾಂಕ: 17–03–2012
4) ಕೇಂದ್ರ ಮಾರಾಟ ತೆರಿಗೆ ನಿಯಮಾವಳಿಗಳು 1957 ನಿಯಮ 12(2)
5) ಈ ಕಛೇರಿಯಿಂದ ಮೆ॥ ಏಟ್ರಿಯಾ ಬೃಂದಾವನ್ ಪವರ್ ಲಿ., ಇವರಿಗೆ ನೀಡಲಾದ 'ಸಿ' ನಮೂನೆ ಸಂಖ್ಯೆ : 1) ಕೆಎ–ಸಿ/01 0117480, ದಿನಾಂಕ: 26–09–2008 2) ಕೆಎ.ಸಿ/01 0117481, ದಿನಾಂಕ: 26–09–2008 3) ಕೆಎ–ಸಿ/01 0117482, ದಿನಾಂಕ: 26–09–2008

**ಪ್ರಸ್ತಾವನೆ:**

ಮೆ॥ ಏಟ್ರಿಯಾ ಬೃಂದಾವನ್ ಪವರ್ ಲಿ., ಬೆಂಗಳೂರು ಇವರು ಉಲ್ಲೇಖ (1)ರ ಪತ್ರದಲ್ಲಿ ಸದರಿಯವರು ಮೆ॥ ಅಂಡ್ರಿಂಟ್ಜ್ ಹೈಡ್ರೊ ಪ್ರೈ ಲಿ., (ಮೆ॥ ವಿಎ. ಟೆಕ್ ಎಸ್ ಚೆರ್ ವೈಎಸ್.ಎಸ್. ಫ್ಲೊವೆಲ್ ಲಿ.,) ಇವರಿಗೆ ವಿತರಿಸಿರುವ 'ಸಿ' ನಮೂನೆ ಮೂಲ ಪತ್ರ ಸಂಖ್ಯೆ : **1) ಕೆಎ–ಸಿ/01 0117480, ದಿನಾಂಕ: 26–09–2008 2) ಕೆಎ.ಸಿ/01 0117481, ದಿನಾಂಕ: 26–09–2008 3) ಕೆಎ–ಸಿ/01 0117482, ದಿನಾಂಕ: 26–09–2008** ಕಳೆದು ಹೋಗಿರುವ ಹಿನ್ನಲೆಯಲ್ಲಿ ನಕಲಿ 'ಸಿ' ನಮೂನೆಯನ್ನು ನೀಡಬೇಕೆಂದು ಕೋರಿ, ಪೂರಕವಾಗಿ ಮೆ॥ ಏಟ್ರಿಯಾ ಬೃಂದಾವನ್ ಪವರ್ ಲಿ., ಬೆಂಗಳೂರು ಇವರು ಮೂಲ 'ಸಿ' ನಮೂನೆ ಕಳೆದುಹೋಗಿರುವುದಕ್ಕೆ ಸಂಬಂಧಿಸಿದ **ಪಲವಾರ ಪೊಲೀಸ್ ಠಾಣೆ** ಬೆಂಗಳೂರು ಇಲ್ಲಿ ದೂರನ್ನು ದಾಖಲಿಸಿರುವ ಪ್ರತಿ, Form G- Form of Indemnity Bond, ದಿನಪತ್ರಿಕೆಗಳಲ್ಲಿ ಪ್ರಕಟಣೆ ನೀಡಿರುವ ಪ್ರತಿಯನ್ನು ಸಲ್ಲಿಸಿದ್ದರು. ಈ ಬಗ್ಗೆ ಉಲ್ಲೇಖ (2)ರಂತೆ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆ)ಮೌ.ತ.ವಿ–1, ಬೆಂಗಳೂರು ಕಛೇರಿಗೆ ಪತ್ರ ಬರೆಯಲಾಗಿ, ಉಲ್ಲೇಖ (3)ರ ಪತ್ರದಲ್ಲಿನಂತೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ : ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಸ್ಥ.ಮೌ.ತೆ.–020/ಸಂಖ್ಯೆ : 02/11–12, ದಿನಾಂಕ: 19–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಕೇಂದ್ರ ಮಾರಾಟ ತೆರಿಗೆ ನಿಯಮಾವಳಿಗಳು 1956 ನಿಯಮ 12(2)ರಂತೆ ಮೆ॥ **ಏಟ್ರಿಯಾ ಬೃಂದಾವನ್ ಪವರ್ ಲಿ.,** ಬೆಂಗಳೂರು, ಇವರಿಗೆ ಈ ಕಛೇರಿಯಿಂದ ನೀಡಲಾಗಿದ್ದ 'ಸಿ' ನಮೂನೆ ಸಂಖ್ಯೆ : **1) ಕೆಎ–ಸಿ/01 0117480, ದಿನಾಂಕ: 26–09–2008 2) ಕೆಎ.ಸಿ/01 0117481, ದಿನಾಂಕ: 26–09–2008 3) ಕೆಎ–ಸಿ/01 0117482, ದಿನಾಂಕ: 26–09–2008** ನ್ನು ರದ್ದುಗೊಳಿಸಿ ಆದೇಶಿಸಲಾಗಿದೆ.

**ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು**
**(ಎಲ್.ವಿ.ಓ–020) ಬೆಂಗಳೂರು,**

**ಪಿಆರ್. 700**

## ಕಾರ್ಮಿಕ ಇಲಾಖೆ

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

### ಪ್ರಕಟಣೆ

**ಪ್ರ.ಸಂ:ಕಾಅದಾ/ಕಾನಪ/ಸಿ.ಆರ್–45/2012, ದಿನಾಂಕ: 16–6–2012**

**ಅರ್ಜಿದಾರರು**

1. ಶ್ರೀ ಜಯಪ್ಪ ಬಿನ್ ತಿಮ್ಮಪ್ಪ, 43 ವರ್ಷ
2. ಶ್ರೀಮತಿ ರತ್ನಮ್ಮ ಗಂಡ ಜಯಪ್ಪ, 40 ವರ್ಷ
   ಚಿಕ್ಕಬನ್ನಿಹಟ್ಟಿ ಗೊಲರಹಟ್ಟಿ, ಹೊಸಕೇರೆ (ಪೊ)
   ಜಗಳೂರು (ತಾ), ದಾವಣಗೆರೆ (ಡಿ)

**ಪ್ರತಿವಾದಿಗಳು**

1. ಚಂದ್ರಮೌಳೇಶ್ವರಯ್ಯ ಬಿನ್ ಶಿವಮೂರ್ತ್ಯಯ್ಯ
   ಟ್ರಾಕ್ಟರ್ ಮತ್ತು ಟ್ರೈಲರ್ ಮಾಲೀಕರು
   ನಂ.ಕೆ.ಎ. 17–0001 ಟಿ ಬಿ 3943–44, ಕೆಳಗೋಟೆ,
   ಕೆಂಚಮಾರಮ್ಮನಹಳ್ಳಿ ಪೋಸ್ಟ್, ಜಗಳೂರು (ತಾ) ದಾವಣಗೆರೆ (ಡಿ).
2. ದಿ ಬ್ರಾಂಚ್ ಮ್ಯಾನೇಜರ್
   ಯುನೈಟೆಡ್ ಇಂಡಿಯಾ ಇಸ್ಯೂರೆನ್ಸ್ ಕಂಪನಿ ಲಿ
   ಬ್ರಾಂಚ್ ಆಫೀಸ್ ಪ್ರವಾಸಿ ಮಂದಿರ ರಸ್ತೆ, ದಾವಣಗೆರೆ

ಶ್ರೀ/ಶ್ರೀಮತಿ ಜಯಪ್ಪ ಬಿನ್ ತಿಮ್ಮಪ್ಪ ಮತ್ತು ರತ್ನಮ್ಮ ಗಂಡ ಜಯಪ್ಪ ಇವರುಗಳಾದ ನಾವು ಮೃತ ಜೆ.ನಾಗರಾಜ್ ಇವರ ತಂದೆ–ತಾಯಿ ಎಂದೂ ನಾವು ಮೃತ ಜೆ.ನಾಗರಾಜ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ, ಮೃತ ನಾಗರಾಜ ಒಂದನೇ ಪ್ರತಿವಾದಿಗಳಾದ ಚಂದ್ರಮೌಳೇಶ್ವರಯ್ಯ ಬಿನ್ ಶಿವಮೂರ್ತ್ಯಯ್ಯರವರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದೇನೆಂದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್.ಹಿರೇಗೌಡರ್**
**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
**ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪಿ.ಆರ್. 845**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಉಪ ವಿಭಾಗ, ಹಾಸನ

### ಪ್ರಕಟಣೆ

**ಸಂಖ್ಯೆ : ಕಾನಪ/ಎಫ್/ಎಸ್ಆರ್–08/2012, ದಿನಾಂಕ : 10–05–2012.**

**ಅರ್ಜಿದಾರರು**

ಶ್ರೀಮತಿ ನಬೀಸಾ ಕೋಂ ಲೇಟ್ ಮಹಮ್ಮದ್
ಮತ್ತು 2 ಜನ ಇತರರು, ಸಕಲೇಶಪುರ

**ಪ್ರತಿವಾದಿಗಳು**

1) ಶ್ರೀ ಬಿ.ಎಂ. ಪೋಕರ್, ನಂ. 150/3, ಆನೆಮಹಲ್ ಗ್ರಾಮ,
   ಸಕಲೇಶಪುರ ತಾಲ್ಲೂಕು
2) ಶ್ರೀರಾಮ್ ಜನರಲ್ ಇನ್ಸುರೆನ್ಸ್ ಕಂಪೆನಿ., ಲಿ., ಬೆಂಗಳೂರು

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ಮಹಮ್ಮದ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ : 27–11–2011 ರಂದು ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ

**ಪಿ.ಆರ್. 702**

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಒಇ 55 ಕಸೈಸೇ 2012, ದಿನಾಂಕ : 15–05–2012**

ಬಿಜಾಪುರ ಜಿಲ್ಲಾ ಸೈನಿಕ ಮಂಡಳಿ, ಬಿಜಾಪುರ ಇಲ್ಲಿಗೆ ಈ ಕೆಳಗೆ ಕಾಣಿಸಿರುವ ಅಧಿಕಾರಿ/ಅಧಿಕಾರೇತರ ಸದಸ್ಯರನ್ನೊಳಗೊಂಡ ಸಮಿತಿಯನ್ನು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಪುನರ್ ರಚಿಸಲಾಗಿದೆ.

1) ಜಿಲ್ಲಾಧಿಕಾರಿಗಳು, ಬಿಜಾಪುರ – ಅಧ್ಯಕ್ಷರು

2) ಸ್ಕ್ವಾಡನ್ ಲೀಡರ್ (ನಿವೃತ್ತ) ಎಂ.ಎಸ್. ಗುಡ್ಡದ್ – ಉಪಾಧ್ಯಕ್ಷರು

3) ಉಪ ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬಿಜಾಪುರ – ಕಾರ್ಯದರ್ಶಿಗಳು

**ಅಧಿಕಾರಿ ಸದಸ್ಯರು**

4) ಉಪ ಕಾರ್ಯದರ್ಶಿ (ಅಭಿವೃದ್ಧಿ) ಜಿಲ್ಲಾ ಪಂಚಾಯತ್, ಬಿಜಾಪುರ – ಸದಸ್ಯರು

5) ಆರಕ್ಷಕ ಅಧೀಕ್ಷಕರು, ಬಿಜಾಪುರ ಜಿಲ್ಲೆ, ಬಿಜಾಪುರ – ಸದಸ್ಯರು

6) ಜನರಲ್ ಮ್ಯಾನೇಜರ್, ಜಿಲ್ಲೆ ಕೈಗಾರಿಕಾ ಕೇಂದ್ರ, ಬಿಜಾಪುರ ಜಿಲ್ಲೆ, ಬಿಜಾಪುರ – ಸದಸ್ಯರು

7) ಉಪ ನಿಬಂಧಕರು, ಸಹಕಾರಿ ಸಂಘಗಳು, ಬಿಜಾಪುರ – ಸದಸ್ಯರು

8) ಜಿಲ್ಲಾ ವಾರ್ತಾ ಮತ್ತು ಪ್ರಚಾರಾಧಿಕಾರಿಗಳು, ಬಿಜಾಪುರ – ಸದಸ್ಯರು

9) ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬಿಜಾಪುರ – ಸದಸ್ಯರು

10) ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ – ಸದಸ್ಯರು

**ಅಧಿಕಾರೇತರ ಸದಸ್ಯರು**

1) ಮಾಜಿ ಸುಬೇದಾರ ಜಿ.ಜಿ. ಹಿರೇಮಠ, ಜಲ ನಗರ, ಬಿಜಾಪುರ – ಸದಸ್ಯರು

2) ಮಾಜಿ ಸುಬೇದಾರ ಎಸ್.ಐ. ಬಗಲಿ, ಕೀರ್ತಿ ನಗರ, ಬಿಜಾಪುರ – ಸದಸ್ಯರು

ಈ ಸಮಿತಿಯ ಅಧಿಕಾರೇತರ ಸದಸ್ಯರುಗಳ ಪ್ರಯಾಣ ಮತ್ತು ದಿನಭತ್ಯೆಯನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ಅನುಬಂಧ–(ಎ)ನಲ್ಲಿ ವರ್ಗೀಕೃತ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಆರ್. ಶ್ರೀನಿವಾಸರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸಹಾಯಕ ಸೇವೆಗಳು)

**ಪಿ.ಆರ್. 703**

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಕಂಇ 07 ಎಲ್‌ಆರ್‌ಎಂ 2012, ದಿನಾಂಕ : 03–05–2012**

ಶ್ರೀ ಕಾಗಿನೆಲೆ ಮಹಾ ಸಂಸ್ಥಾನ ಕನಕ ಗುರು ಪೀಠ, ಹಾವೇರಿ ಜಿಲ್ಲೆ ಇವರು ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕು, ಮೈಲಾರ ಗ್ರಾಮದಲ್ಲಿ ಧಾರ್ಮಿಕ ಉದ್ದೇಶಕ್ಕಾಗಿ ಭೂಮಿ ಖರೀದಿಸುವುದಕ್ಕೆ ಸಂಬಂಧಿಸಿದ ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 22 ಎಲ್‌ಆರ್‌ಎಂ 2010, ದಿನಾಂಕ: 30–08–2011ರ ಮೊದಲನೇ ಕಂಡಿಕೆಯ ಎರಡನೇ ಸಾಲಿನಲ್ಲಿ ಹಾಗೂ ನಾಲ್ಕನೇ ಕಂಡಿಕೆಯ ಆರನೇ ಸಾಲಿನಲ್ಲಿ "**ಮೈಲಾರ ಗ್ರಾಮದ ಸರ್ವೆ ನಂ. 134ಬಿ/1ಎ ಹಾಗೂ ಇತರೆಗಳಲ್ಲಿ ಒಟ್ಟು 07 ಎಕರೆ 09 ಗುಂಟೆ**" ಎಂಬುದರ ಬದಲು **"ಮೈಲಾರ ಗ್ರಾಮದ ಸರ್ವೆ ನಂ. 134ಬಿ/1ಎ ರಲ್ಲಿ 0.71 ಗುಂಟೆ ಹಾಗೂ ಹೊಳಲು ಗ್ರಾಮದ ಸರ್ವೆ ನಂ. 570/ಬಿ ರಲ್ಲಿ 06 ಎಕರೆ 38 ಗುಂಟೆ"** ಎಂಬುದನ್ನು ಸೇರಿಸಿಕೊಂಡು ಓದತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎನ್. ಶ್ರೀನಿವಾಸ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ)

**ಪಿ.ಆರ್. 704**

## WATER RESOURCES SECRETARIAT

### NOTIFICATION

### No. WRD 60 KBN 2012, Dated : 29-03-2012

Government of Karnataka hereby guarantees the repayment of Principal amount and interest thereon during the pendency of the Bonds, on the due dates, with put and call options as indicated in the offer documents in respect of Series 2012-A Bonds to be issued by Krishna Bhagya Jala Nigam Limited (the Company) to the extent of Rs. 250.00 Crores (Rupees Two hundred fifty crores only) to be allotted on or before 31st March 2012 and to redeem the same in the years stipulated in the respective offer documents. This Guarantee is unconditional and irrevocable and will be inforce until all the Serious 2012-A Bonds issued by the Company Pursuant to the above are redeemed.

By Order and in the name of Governor of Karnataka,

**I.D. DHAMAN,**

Officer on Special Duty,

Water Resources Department (KBJAN)

**PR 706**

### DIRECTORATE OF ECONOMICS AND STATISTICS

### BANGALORE-1

### Consumer Price Index Numbers for Industrial Workes

**No. DES 38 PWX 2012** **Month : February, 2012**

**State : Karnataka** **Base : 1987-88=100** **Date : 30-04-2012**

| | Group/Sub-Group | Bellary | Bhadra-vathi | Davan-gere | Dandeli | Gulbarga | Harihar | Hassan | Mandya | Manga lore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:** | | | | | | | | | | | |
| | (a) Cereals & Products | 746 | 642 | 767 | 684 | 799 | 703 | 617 | 693 | 621 | 807 | 603 |
| | (b) Pulses & Products | 565 | 660 | 701 | 751 | 604 | 637 | 659 | 671 | 636 | 636 | 634 |
| | (c) Oil & Fats | 357 | 393 | 388 | 406 | 436 | 408 | 382 | 431 | 287 | 404 | 413 |
| | (d) Meat, Fish & Eggs | 742 | 820 | 849 | 698 | 851 | 784 | 722 | 836 | 669 | 1016 | 715 |
| | (e) Milk & Products | 532 | 536 | 693 | 630 | 564 | 639 | 546 | 658 | 615 | 581 | 518 |
| | (f) Condiments & Spices | 441 | 554 | 782 | 814 | 453 | 455 | 563 | 651 | 577 | 687 | 583 |
| | (g) Vegetables & Fruits | 593 | 581 | 765 | 817 | 504 | 599 | 693 | 580 | 560 | 561 | 719 |
| | (h) Other Food | 493 | 760 | 633 | 649 | 573 | 494 | 609 | 585 | 486 | 504 | 527 |
| | **FOOD GROUP INDEX** | 607 | 634 | 713 | 678 | 642 | 607 | 606 | 669 | 573 | 687 | 585 |
| II | Pan, Supari, Tobacco & Intoxicants | 536 | 787 | 739 | 497 | 480 | 706 | 632 | 552 | 428 | 552 | 695 |
| III | Fuel & Light | 476 | 454 | 552 | 643 | 518 | 541 | 533 | 601 | 409 | 657 | 403 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 284 | 480 | 382 | 390 | 367 | 303 | 447 | 622 | 309 | 639 | 234 |
| VI. | **Miscellaneous:** | | | | | | | | | | | |
| | (a) Medical Care | 663 | 914 | 494 | 457 | 359 | 277 | 463 | 552 | 354 | 429 | 262 |
| | (b) Education, & Amusement | 567 | 593 | 831 | 304 | 650 | 667 | 600 | 470 | 773 | 786 | 809 |
| | (c) Transport & Communication | 692 | 640 | 654 | 526 | 667 | 688 | 603 | 577 | 762 | 494 | 618 |
| | (d) Personal Care & effects | 375 | 406 | 449 | 394 | 456 | 365 | 365 | 441 | 447 | 356 | 367 |
| | (e) Others | 451 | 474 | 546 | 571 | 398 | 368 | 373 | 561 | 349 | 577 | 360 |
| | Miscellaneous Group | 504 | 545 | 577 | 444 | 492 | 435 | 453 | 505 | 531 | 517 | 454 |
| | **GENERAL INDEX** | **495** | **533** | **576** | **540** | **504** | **483** | **513** | **566** | **484** | **584** | **430** |
| | To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

**for Director**.

**GOVERNMENT OF INDIA**

**MINISTRY OF LABOUR**

**LABOUR BUREAU**

**CLEREMONT SHIMLA-171004, DATED 3rd April 2012**

**Consumer Price Index Numbers for Industrial Workers (Base 2001-100)**

**MONTH : FEBRUARY, 2012**

| Group/Sub-group/Centre | Bangalore | Belgaum | Hubli-Dharwad | Mercara | Mysore |
|---|---|---|---|---|---|
| **Food** | | | | | |
| (a) Cereals & Products | 174 | 225 | 226 | 161 | 161 |
| (b) Pulses and & Products | 212 | 220 | 229 | 223 | 216 |
| (c) Oils & Fats | 223 | 248 | 233 | 226 | 213 |
| (d) Meat, Fish & Eggs | 251 | 300 | 272 | 229 | 280 |
| (e) Milk & Products | 220 | 212 | 209 | 213 | 234 |
| (f) Condiments & Spices | 212 | 186 | 212 | 201 | 213 |
| (g) Vegetables & Fruits | 218 | 256 | 221 | 224 | 206 |
| (h) Other Food | 239 | 215 | 220 | 210 | 213 |
| FOOD GROUP | 213 | 228 | 226 | 198 | 206 |
| Pan, Supari, Tobacco & Intoxican | 195 | 206 | 192 | 167 | 206 |
| Fuel and Light | 153 | 185 | 169 | 339 | 175 |
| Housing Index | 208 | 206 | 244 | 101 | 220 |
| Clothing, Bedding and Footwear | 135 | 151 | 147 | 164 | 160 |
| **Miscellaneous** | | | | | |
| (a) Medical care | 206 | 187 | 165 | 175 | 163 |
| (b) Education, Recreation & Amusemen | 175 | 148 | 204 | 167 | 118 |
| (c) Transport and Communication | 266 | 250 | 258 | 194 | 210 |
| (d) Personal Care & Effects | 210 | 168 | 183 | 176 | 199 |
| (e) Others | 199 | 175 | 153 | 194 | 189 |
| Miscellaneous Group | 217 | 186 | 194 | 181 | 173 |
| GENERAL INDEX | 204 | 209 | 212 | 193 | 196 |

**P. N. KAUNDAL,**
**ECONOMIC OFFICER**

PR-705

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ನಅಇ 123 ಬೆಮಪ್ರಾ 2012, ಬೆಂಗಳೂರು, ದಿನಾಂಕ : 02ನೇ ಜೂನ್, 2012.**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4–(ಎ)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಕರ್ನಾಟಕ ಸರ್ಕಾರವು ಸಿದ್ದಾಪುರ ಪಟ್ಟಣ ಪಂಚಾಯಿತಿಯ ವ್ಯಾಪ್ತಿ ಪ್ರದೇಶವನ್ನು ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲಾಗಿದೆ. ಹಾಗೂ ಇದೇ ಕಾಯ್ದೆಯ ಕಲಂ 2(7)(ಬಿ) ರಲ್ಲಿನ ಅವಕಾಶದಂತೆ ಸಿದ್ದಾಪುರ ಪಟ್ಟಣ ಪಂಚಾಯಿತಿಯು ಯೋಜನಾ ಪ್ರಾಧಿಕಾರವಾಗಿ ಕೂಡಲೇ ಜಾರಿಗೆ ಬರುವಂತೆ ಕಾರ್ಯನಿರ್ವಹಿಸತಕ್ಕದ್ದು.

ಅನುಬಂಧ–1 ರಲ್ಲಿ ಸಿದ್ದಾಪುರ ಪಟ್ಟಣ ಪಂಚಾಯಿತ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಪಟ್ಟಣ : ಗ್ರಾಮಗಳ ಹೆಸರನ್ನು ಹಾಗೂ ಅನುಬಂಧ–2ರಲ್ಲಿ ಸಿದ್ದಾಪುರ ಪಟ್ಟಣ ಪಂಚಾಯತ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಗಳನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಎಂ. ವಾಸುದೇವ ರಾವ್,**

ಸರ್ಕಾರದ ಅಧೀನ ಕಾರ್ಯದರ್ಶಿಗಳು,

ನಗರಾಭಿವೃದ್ಧಿ ಇಲಾಖೆ.

**ಅನುಬಂಧ–1**

ಪ್ರಸ್ತಾಪಿತ ಸಿದ್ದಾಪುರ ಪಟ್ಟಣ ಪಂಚಾಯತ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಪಟ್ಟಣ : ಗ್ರಾಮಗಳ ಹೆಸರು

| ಕ್ರಮ ಸಂಖ್ಯೆ | | ಪಟ್ಟಣ/ಗ್ರಾಮಗಳ ಹೆಸರು |
|---|---|---|
| 1 | ಬಾಲಿಕೊಪ್ಪ | ಪೂರ್ಣ ಕಂದಾಯ ಗ್ರಾಮ (ಸ.ನಂ. 1 ರಿಂದ 395) |
| 2 | ಕೊಂಡ್ಲಿ | ಪೂರ್ಣ ಕಂದಾಯ ಗ್ರಾಮ (ಸ.ನಂ. 1 ರಿಂದ 675) |
| 3 | ಹಣಜಿಬೈಲ | ಪೂರ್ಣ ಕಂದಾಯ ಗ್ರಾಮ (ಸ.ನಂ. 1 ರಿಂದ 203) |
| 4 | ಹೊಸೂರ | ಪೂರ್ಣ ಕಂದಾಯ ಗ್ರಾಮ (ಸ.ನಂ. 1 ರಿಂದ 289) |

**ಅನುಬಂಧ–2**

**ಪ್ರಸ್ತಾಪಿತ ಸಿದ್ದಾಪುರ ಪಟ್ಟಣ ಪಂಚಾಯತ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಣೆ**

ಸಿದ್ದಾಪುರ ಪಟ್ಟಣ ಪಂಚಾಯತ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯು "ಎ" ಬಿಂದುವಿನಲ್ಲಿ ಅಂದರೆ ಬಾಲಿಕೊಪ್ಪ ಗ್ರಾಮದ ಸ.ನಂ. 182ರ ಉತ್ತರ ಮೂಲೆಯಲ್ಲಿ ಪ್ರಾರಂಭವಾಗಿ ಇದೇ ಸಂ.ನಂ. 182ರ ಆಗ್ನೇಯ ದಿಕ್ಕಿಗೆ ಅಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 182ರ ಈಶಾನ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಸಿದ್ದಾಪುರದಿಂದ ಶಿರಸಿಗೆ ಹೋಗುವ ರಾಜ್ಯ ಹೆದ್ದಾರಿಯನ್ನು ದಾಟಿ ಬಾಲಿಕೊಪ್ಪ ಗ್ರಾಮದ ಸ.ನಂ. 267ರ ವಾಯುವ್ಯ ಗಡಿಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 267ರ ಉತ್ತರ ಗಡಿಯ ಮೂಲಕ ಆಗ್ನೇಯ ದಿಕ್ಕಿಗೆ ಅಭಿಮುಖವಾಗಿ ಚಲಿಸುತ್ತಾ ಬಾಲಿಕೊಪ್ಪ ಗ್ರಾಮದ ಸ.ನಂ. 170ರ ವಾಯುವ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 170ರ ಉತ್ತರ ಗಡಿಯ ಮೂಲಕ ಈಶಾನ್ಯ ದಿಕ್ಕಿಗೆ ಅಭಿಮುಖವಾಗಿ ಚಲಿಸಿ ಬಾಲಿಕೊಪ್ಪ ಗ್ರಾಮದ ಸ.ನಂ. 99ರ ನೈರುತ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 99ರ ಪಶ್ಚಿಯ ಗಡಿಯ ಮೂಲಕ ಉತ್ತರಾಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 99ರ ವಾಯುವ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 99ರ ಉತ್ತರ ಗಡಿಯ ಮೂಲಕ ಪೂರ್ವಾಭಿಮುಖವಾಗಿ ಚಲಿಸುತ್ತಾ ಸಿದ್ದಾಪುರದಿಂದ ಬಳ್ಳಟ್ಟೆಗೆ ಹೋಗುವ ಜಿಲ್ಲಾ ಮುಖ್ಯ ರಸ್ತೆಯನ್ನು ದಾಟಿ ಚಲಿಸುತ್ತಾ ಕೊಂಡ್ಲಿ ಗ್ರಾಮದ ಸ.ನಂ. 292ಬ ರ ವಾಯುವ್ಯ ಮೂಲೆಯಲ್ಲಿ ಸಂಧಿಸಿ ಇದೇ ಸ.ನಂ. 292ಬ ಹಾಗೂ ಕೊಂಡ್ಲಿ ಗ್ರಾಮದ ಸ.ನಂ. 291ರ ಉತ್ತರ ಗಡಿಯ ಮೂಲಕ ಪೂರ್ವಾಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 291ರ ಈಶಾನ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಸಿದ್ದಾಪುರದಿಂದ ಚಂದ್ರಗುತ್ತಿಗೆ ಹೋಗುವ ರಾಜ್ಯ ಹೆದ್ದಾರಿಯನ್ನು ದಾಟಿ ಕೊಂಡ್ಲಿ ಗ್ರಾಮದ ಸ.ನಂ. 293ರ ವಾಯುವ್ಯ ಮೂಲೆಯಲ್ಲಿ ಸಂಧಿಸಿ ಇದೇ ಸ.ನಂ. 293ರ ಉತ್ತರ ಹಾಗೂ ಕೊಂಡ್ಲಿ ಗ್ರಾಮದ ಸ.ನಂ. 290ರ ಹಾಗೂ ಇದೇ ಸ.ನಂ. 293 ಹಾಗೂ ಕೊಂಡ್ಲಿ ಗ್ರಾಮದ ಸ.ನಂ. 289ರ ಉತ್ತರ ಗಡಿಯ ಮೂಲಕ ಪೂರ್ವಾಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 289ರ ಈಶಾನ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 289 ಹಾಗೂ ಕೊಂಡ್ಲಿ ಗ್ರಾಮದ ಸ.ನಂ. 293, 284, 665ಬ ರ ಪೂರ್ವಗಡಿಯ ಮೂಲಕ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಸಿದ್ದಾಪುರದಿಂದ ಕೊಳಗಿಗೆ ಹೋಗುವ ಜಿಲ್ಲಾ ಮುಖ್ಯ ರಸ್ತೆಯನ್ನು ದಾಟಿ ಕೊಂಡ್ಲಿ ಗ್ರಾಮದ ಸ.ನಂ. 665ಬ3 ಈಶಾನ್ಯ ಮೂಲೆಯಲ್ಲಿ ಸಂದಿಸುತ್ತದೆ. ನಂತರ ಇದೇ ಸ.ನಂ. 665ಬ3 ಹಾಗೂ ಕೊಂಡ್ಲಿ ಗ್ರಾಮದ ಸ.ನಂ. 665ಬ2ರ ಪೂರ್ವ ಗಡಿಯ ಮೂಲಕ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 665ಬ2ರ ಆಗ್ನೇಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 665ಬ2ರ ದಕ್ಷಿಣ ಗಡಿಯ ಮೂಲಕ ಪಶ್ಚಿಮಾಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 665ಬ2 ರ ನೈರುತ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 665ಬ2ರ ಪಶ್ಚಿಮ ಗಡಿಯ ಮೂಲಕ ಉತ್ತರಾಭಿಮುಖವಾಗಿ ಚಲಿಸಿ ಕೊಂಡ್ಲಿ ಗ್ರಾಮದ ಸ.ನಂ. 180 ರ ಆಗ್ನೇಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 180ರ ದಕ್ಷಿಣ ಗಡಿಯ ಮೂಲಕ ನೈರುತ್ಯ ದಿಕ್ಕಿಗೆ ಅಭಿಮುಖವಾಗಿ ಚಲಿಸುತ್ತಾ ಕೊಂಡ್ಲಿ ಗ್ರಾಮದ ಸ.ನಂ. 253ರ ಈಶಾನ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 253 ಹಾಗೂ ಕೊಂಡ್ಲಿ ಗ್ರಾಮದ ಸ.ನಂ. 180ಅ ರ ಪೂರ್ವ ಗಡಿಯ ಮೂಲಕ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಕೊಂಡ್ಲಿ ಗ್ರಾಮದ ಸ.ನಂ. 194ರ ವಾಯುವ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 194ರ ಉತ್ತರ ಗಡಿಯ ಮೂಲಕ ಪೂರ್ವಾಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 194ರ ಈಶಾನ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 194ರ ಪೂರ್ವ ಗಡಿಯ ಮೂಲಕ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಕೊಂಡ್ಲಿ ಗ್ರಾಮದ ಸ.ನಂ. 180ಅ ರ ಗಡಿಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 180ಅ ಹಾಗೂ ಕೊಂಡ್ಲಿ ಗ್ರಾಮದ ಸ.ನಂ. 193, 192, 180ಅ ರ ಉತ್ತರ ಗಡಿಯ ಮೂಲಕ ಚಲಿಸುತ್ತಾ ಇದೇ ಸ.ನಂ. 180ಅ ರ ಪೂರ್ವದ ಮೂಲೆಯಲ್ಲಿ ಸಂಧಿಸಿ ಸಿದ್ದಾಪುರದಿಂದ ಸೊರಬಕ್ಕೆ ಹೋಗುವ ರಾಜ್ಯ ಹೆದ್ದಾರಿಯನ್ನು ದಾಟಿ ಇದೇ ಸ.ನಂ. 180ಅ ರ ಪೂರ್ವ ಗಡಿಯ ಮೂಲಕ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 180ಅ ರ ಆಗ್ನೇಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ.180ಅ ರ ದಕ್ಷಿಣ ಗಡಿಯ ಮೂಲಕ ಪಶ್ಚಿಮಾಭಿಮುಖವಾಗಿ ಚಲಿಸುತ್ತಾ ಕೊಂಡ್ಲಿ ಗ್ರಾಮದ ಸ.ನಂ. 137ರ ಈಶಾನ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 137

ಹಾಗೂ ಕೊಂಡ್ಲಿ ಗ್ರಾಮದ ಸ.ನಂ. 136ರ ಪೂರ್ವ ಗಡಿಯ ಮೂಲಕ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 136ರ ದಕ್ಷಿಣ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 136 ಹಾಗೂ ಕೊಂಡ್ಲಿ ಗ್ರಾಮದ ಸ.ನಂ. 135, 134, 133, 131, 130 ರ ದಕ್ಷಿಣ ಗಡಿಯ ಮೂಲಕ ಪಶ್ಚಿಮಾಭಿಮುಖವಾಗಿ ಚಲಿಸುತ್ತಾ ಹಣಜಿಬೈಲ ಗ್ರಾಮದ ಸ.ನಂ. 168ರ ಪೂರ್ವದ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 168 ಹಾಗೂ ಹಣಜಿಬೈಲ ಗ್ರಾಮದ ಸ.ನಂ. 169 ರ ದಕ್ಷಿಣ ಗಡಿಯ ಮೂಲಕ ನೈರುತ್ಯ ದಿಕ್ಕಿಗೆ ಅಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 165ರ ಪೂರ್ವ ಗಡಿಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 165ರ ಪೂರ್ವ ಗಡಿಯ ಮೂಲಕ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಹಣಜಿಬೈಲ ಗ್ರಾಮದ ಸ.ನಂ. 170 ರ ಪೂರ್ವ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 170 ಹಾಗೂ ಹಣಜಿಬೈಲ ಗ್ರಾಮದ ಸ.ನಂ. 172, 173,174, 175, 177 ರ ಪೂರ್ವ ಗಡಿಯ ಮೂಲಕ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 177 ರ ದಕ್ಷಿಣ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 177ರ ದಕ್ಷಿಣ ಗಡಿಯ ಮೂಲಕ ವಾಯುವ್ಯ ದಿಕ್ಕಿಗೆ ಅಭಿಮುಖವಾಗಿ ಚಲಿಸುತ್ತಾ ಸಿದ್ದಾಪುರದಿಂದ ಕಾಣಸೆಗೆ ಹೋಗುವ ಜಿಲ್ಲಾ ಮುಖ್ಯ ರಸ್ತೆಯನ್ನು ದಾಟಿ ಚಲಿಸುತ್ತಾ ಹಣಜಿಬೈಲ ಗ್ರಾಮದ ಸ.ನಂ. 178ರ ಪೂರ್ವಗಡಿಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 178 ಹಾಗೂ ಹಣಜಿಬೈಲ ಗ್ರಾಮದ ಸ.ನಂ. 179, 180, 183, 184, 185, 186, 187, 188, 191, 192, 5, 6, 10, 11, 12 ರ ಪೂರ್ವ ಗಡಿಯ ಮೂಲಕ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಹಣಜಿಬೈಲ ಗ್ರಾಮದ ಸ.ನಂ. 25ರ ಈಶಾನ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 25 ಹಾಗೂ ಹಣಜಿಬೈಲ ಗ್ರಾಮದ ಸ.ನಂ. 27, 38, 39, 46, 203, 87ರ ಪೂರ್ವ ಗಡಿಯ ಮೂಲಕ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 87ರ ಆಗ್ನೇಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 87ರ ದಕ್ಷಿಣ ಗಡಿಯ ಮೂಲಕ ಪಶ್ಚಿಮಾಭಿಮುಖವಾಗಿ ಚಲಿಸುತ್ತಾ ಸಿದ್ದಾಪುರದಿಂದ ಅಕ್ಕುಂಜಿಗೆ ಹೋಗುವ ಜಿಲ್ಲಾ ಮುಖ್ಯ ರಸ್ತೆಯನ್ನು ದಾಟಿ ಚಲಿಸುತ್ತಾ ಇದೇ ಸ.ನಂ. 87ರ ದಕ್ಷಿಣ ಗಡಿಯಲ್ಲಿನ ನೈರುತ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 87ರ ಪಶ್ಚಿಮ ಗಡಿಯ ಮೂಲಕ ಈಶಾನ್ಯ ದಿಕ್ಕಿಗೆ ಅಭಿಮುಖವಾಗಿ ಚಲಿಸುತ್ತಾ ಹೊಸೂರ ಗ್ರಾಮದ ಸ.ನಂ. 153ಬ5 ರ ಆಗ್ನೇಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 153ಬ5 ರ ದಕ್ಷಿಣ ಗಡಿಯ ಮೂಲಕ ಪಶ್ಚಿಮಾಭಿಮುಖವಾಗಿ ಚಲಿಸುತ್ತಾ ಸಿದ್ದಾಪುರದಿಂದ ಸಾಗರಕ್ಕೆ ಹೋಗುವ ರಾಜ್ಯ ಹೆದ್ದಾರಿಯನ್ನು ದಾಟಿ ಹೊಸೂರ ಗ್ರಾಮದ ಸ.ನಂ. 154 ರ ಆಗ್ನೇಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 154ಅ ಹಾಗೂ ಹೊಸೂರ ಗ್ರಾಮದ ಸ.ನಂ. 288 ಹಾಗೂ ಸ.ನಂ. 154ಬ ರ ದಕ್ಷಿಣ ಗಡಿಯ ಮೂಲಕ ಪಶ್ಚಿಮಾಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 154ಅ ರ ನೈರುತ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಸಿದ್ದಾಪುರದಿಂದ ಜೋಗಕ್ಕೆ ಹೋಗುವ ರಾಜ್ಯ ಹೆದ್ದಾರಿಯನ್ನು ದಾಟಿ ಹೊಸೂರ ಗ್ರಾಮದ ಸ.ನಂ. 205 ರ ಆಗ್ನೇಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 205 ರ ದಕ್ಷಿಣ ಗಡಿಯ ಮೂಲಕ ಪಶ್ಚಿಮಾಭಿಮುಖವಾಗಿ ಚಲಿಸುತ್ತಾ ಇದೇ ಸ.ನಂ. 205 ರ ನೈರುತ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 205ರ ಪಶ್ಚಿಮ ಗಡಿಯ ಮೂಲಕ ಉತ್ತರಾಭಿಮುಖವಾಗಿ ಚಲುಸುತ್ತಾ ಇದೇ ಸ.ನಂ. 205 ರ ವಾಯುನ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಸಿದ್ದಾಪುರದಿಂದ ಕುಮಟಾಕ್ಕೆ ಹೋಗುವ ರಾಜ್ಯ ಹೆದ್ದಾರಿಯನ್ನು ದಾಟಿ ಹೊಸೂರ ಗ್ರಾಮದ ಸ.ನಂ. 23ಅ1ಅ ರ ನೈರುತ್ಯ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಇದೇ ಸ.ನಂ. 23ಅ1ಅ ರ ಪಶ್ಚಿಮ ಗಡಿಯ ಮೂಲಕ ಉತ್ತರಾಭಿಮುಖವಾಗಿ ಚಲಿಸುತ್ತಾ ಸಿದ್ದಾಪುರದಿಂದ ತ್ಯಾರಸಿಗೆ ಹೋಗುವ ರಾಜ್ಯ ಹೆದ್ದಾರಿಯನ್ನು ದಾಟಿ ಇದೇ ಸ.ನಂ. 23ಅ ಹಾಗೂ ಹೊಸೂರ ಗ್ರಾಮದ ಸ.ನಂ. 30ರ ಪಶ್ಚಿಮ ಗಡಿಯ ಮೂಲಕ ಉತ್ತರಾಭಿಮುಖವಾಗಿ ಚಲಿಸುತ್ತಾ ಬಾಲಿಕೊಪ್ಪ ಗ್ರಾಮದ ಸ.ನಂ. 261ರ ನೈರುತ್ಯ ಮೂಲೆಯನ್ನು ಸಂಧಿಸುತ್ತದೆ. ನಂತರ ಇದೇ ಸ.ನಂ. 261 ಹಾಗೂ ಬಾಲಿಕೊಪ್ಪ ಗ್ರಾಮದ ಸ.ನಂ. 260, 216,215, 387, 182 ರ ಪಶ್ಚಿಮ ಗಡಿಯ ಮೂಲಕ ಉತ್ತರಾಭಿಮುಖವಾಗಿ ಚಲಿಸುತ್ತಾ ಬಾಲಿಕೊಪ್ಪ ಗ್ರಾಮದ ಸ.ನಂ. 182ರ ವಾಯುವ್ಯ ಮೂಲೆಯಲ್ಲಿ ಸಂಧಿಸುತ್ತದೆ. ಇದೇ ಸ.ನಂ. 182 ರ ಉತ್ತರ ಗಡಿಯ ಮೂಲಕ ಈಶಾನ್ಯ ದಿಕ್ಕಿಗೆ ಅಭಿಮುಖವಾಗಿ ಚಲಿಸಿ ಪ್ರಾರಂಭಿಸಿದ “ಎ” ಬಿಂದುವಿನಲ್ಲಿ ಅಂದರೆ ಬಾಲಿಕೊಪ್ಪ ಗ್ರಾಮದ ಸ.ನಂ. 182 ರ ಉತ್ತರ ಮೂಲೆಯಲ್ಲಿ ವಿಲೀನವಾಗುತ್ತದೆ.

**ಟಿ. ಎಂ. ವಾಸುದೇವ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 826**

## OFFICE OF DEPUTY COMMISSIONER HASSAN DISTRICT, HASSAN

## NOTIFICATION

## No. RRT/Bhoomi/67/09-10, DATED : 23-05-2012

**Subject :** Issue of Manual certificates by all Tahsildhars, in Hassan district during period 23/05/2012 to 29/05/2012.

**Reference :** Government Circular No. EDCS : 02 : REV : 2007, dated : 23-05-2012

It is reported that, nemmadi service in few tele centers across the state is disrupted. As the demand for RDS certificates attained peak during the period, the disruption may affect RDS delivery adversely.

In order to tide over the situation and to ensure uninterrupted nemmadi service to the citizens, I K.P. Mohan Raj, Deputy Commissioner, Hassan district, Hassan after applying my mind, order that, all Tahsildar in Hassan district is empowered to issue manual RDS certificates from 23/05/2012. (period not to exceed 7 days).

The various authorities, to whom any certificate is presented, issued during above period by all Thasildhars in Hassan district should accept such manual certificates.

This Notification shall automatically expire on 29/3/2012 or whenever the services of Nemmadi centre resumes, whichever is earlier.

No manual certificate, issued by all Tahsildhar in Hassan district during the period not covered by above Notification, should be accepted by any authority.

**K. P. MOHAN RAJ,**
Deputy Commissioner,
Hassan District, Hassan.

**P.R. No. 830**

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಕಂಇ 70 ಎಲ್‌ಆರ್‌ಎಂ 2011, ಬೆಂಗಳೂರು, ದಿನಾಂಕ : 08ನೇ ಜೂನ್, 2012.**

ಶ್ರೀ ಮುಖ್ಯಪ್ರಾಣ ಲಕ್ಷ್ಮೀ ವೆಂಕಟೇಶ ದೇವ, ಗುಂಡಬಾಳ, ಉತ್ತರ ಕನ್ನಡ ಜಿಲ್ಲೆ ಇವರಿಗೆ ಹೊನ್ನಾವರ ತಾಲ್ಲೂಕು, ಗುಂಡಬಾಳ ಗ್ರಾಮದ ಸ.ನಂ. 93/1ಬ/ಬ2 ಕ್ಷೇತ್ರ 0–27 ಎಕರೆ ಹಾಗೂ ಸರ್ವೆ ನಂ. 91 ರಲ್ಲಿ 1–16 ಎಕರೆ ಹೀಗೆ ಒಟ್ಟು 2–03 ಎಕರೆ ಕೃಷಿ ಜಮೀನನ್ನು **ಧಾರ್ಮಿಕ ಉದ್ದೇಶಕ್ಕಾಗಿ** ನಮೂನೆ 15–ಎ ಮತ್ತು ನಮೂನೆ 15ಎಎ ರಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪತ್ರ ಸಂಖ್ಯೆ : ಕಂಶಾ/ಭೂಸು/ವಿವ.04/2011–12 ದಿನಾಂಕ : 07–06–2011 ರಲ್ಲಿ ಪ್ರಸ್ತಾಪಿತ ಮೇಲ್ಕಂಡ ಜಮೀನನ್ನು ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 (1) (iii) ರಡಿ ಅನುಮೋದನೆ/ವಿನಾಯಿತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಆ ಸಂಬಂಧದ ದಾಖಲಾತಿಗಳನ್ನು ಪರಿಶೀಲಿಸಲಾಗಿ ಉಲ್ಲೇಖಿತ ಭೂಮಿಯು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಗಳು (1969) ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ (1961)ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ)ರಡಿ ಅವಕಾಶ ಕಲ್ಪಿಸಿದೆ.

ಸದರಿ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಅಧಿನಿಯಮ (1961)ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ ನಿಯಮಗಳ (1974)ರ ನಿಯಮ 38–ಬಿ ಮತ್ತು 38–ಸಿ ರಲ್ಲಿ ನಮೂದಿಸಿರುವ ಷರತ್ತುಗಳನ್ನು ಪೂರೈಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ, ಮತ್ತು 80 ಕ್ಕೆ ವಿನಾಯಿತಿ ನೀಡಿ ಶ್ರೀ ಮುಖ್ಯಪ್ರಾಣ ಲಕ್ಷ್ಮೀ ವೆಂಕಟೇಶ ದೇವ, ಗುಂಡಬಾಳ, ಉತ್ತರ ಕನ್ನಡ ಜಿಲ್ಲೆ ಇವರಿಗೆ ಹೊನ್ನಾವರ ತಾಲ್ಲೂಕು, ಗುಂಡಬಾಳ ಗ್ರಾಮದ ಸ.ನಂ. 93/1ಬ/ಬ2 ಕ್ಷೇತ್ರ 0–27 ಎಕರೆ ಹಾಗೂ ಸರ್ವೆ ನಂ. 91ರಲ್ಲಿ 1–16 ಎಕರೆ ಹೀಗೆ ಒಟ್ಟು 2–03 ಎಕರೆ ಕೃಷಿ ಜಮೀನನ್ನು **ಧಾರ್ಮಿಕ ಉದ್ದೇಶಕ್ಕಾಗಿ** ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 (1)(iii)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ :–

(1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು.

(2) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯತಿ ಮಾತ್ರವಾಗಿರುತ್ತದೆ. ಬೇರೆ ಅಧಿನಿಯಮಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

(3) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

(4) ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೊದನೆ ಪಡೆಯತಕ್ಕದ್ದು.

(5) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದಲ್ಲ.

(6) ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ./ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆದು ಉಪಯೋಗಿಸತಕ್ಕದ್ದು.

(7) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.

ಮೇಲಿನ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಎನ್. ಶ್ರೀನಿವಾಸ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**ಪಿ.ಆರ್. 834**

**GOVERNMENT OF KARNATAKA**

**DIRECTORATE OF ECONOMICS AND STATISTICS**

**BANGALORE-1**

**Consumer Price Index Numbers for Industrial Workers**

**No. DES 38 PWX 2012** **Month : April 2012,**

**State : Karnataka** **Base : 1987-88=100** **Date : 15-06-2012**

| | Group/Sub-Group | Bell-ary | Bhad-ra-vathi | Da-van-gere | Dan-deli | Gul-bar-ga | Hari-har | Has-san | Man-dya | Man-ga-lore | Rai-chur | Tum kur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | FOOD: | | | | | | | | | | | |
| | (a) Cereals & Products | 757 | 665 | 799 | 692 | 746 | 725 | 617 | 711 | 605 | 835 | 611 |
| | (b) Pulses & Products | 566 | 668 | 689 | 743 | 597 | 625 | 659 | 686 | 636 | 655 | 642 |
| | (c) Oil & Fats | 368 | 402 | 388 | 406 | 498 | 410 | 382 | 431 | 278 | 455 | 420 |
| | (d) Meat, Fish & Eggs | 775 | 842 | 869 | 774 | 950 | 830 | 734 | 865 | 635 | 1016 | 715 |
| | (e) Milk & Products | 532 | 536 | 693 | 630 | 564 | 639 | 546 | 658 | 615 | 581 | 518 |
| | (f) Condiments & Spices | 419 | 529 | 786 | 867 | 401 | 485 | 557 | 595 | 545 | 620 | 527 |
| | (g) Vegetables & Fruits | 665 | 751 | 783 | 865 | 704 | 674 | 877 | 818 | 715 | 600 | 934 |
| | (h) Other Food | 493 | 792 | 647 | 648 | 577 | 514 | 609 | 564 | 490 | 510 | 524 |
| | **FOOD GROUP INDEX** | 620 | 664 | 728 | 693 | 648 | 627 | 621 | 690 | 570 | 701 | 603 |
| II | Pan, Supari, Tobacco & Intoxicants | 536 | 765 | 760 | 501 | 496 | 734 | 632 | 551 | 431 | 552 | 695 |
| III | Fuel & Light | 476 | 454 | 589 | 645 | 563 | 541 | 533 | 622 | 429 | 660 | 403 |
| IV. | Housing | 100 | 100 | 100 | IOO | IOO | IOO | 100 | IOO | 100 | 100 | IOO |
| V. | Clothing, Bedding & Footwear | 284 | 480 | 385 | 391 | 367 | 332 | 451 | 626 | 309 | 639 | 234 |

| | | | | | | | | | | | |
|---|---|---|---|---|---|---|---|---|---|---|---|
| VI. | Miscellaneous: | | | | | | | | | | |
| | (a) Medical Care | 663 | 914 | 494 | 457 | 359 | 277 | 463 | 552 | 354 | 429 | 262 |
| | (b) Education, Recreation & Amusement | 603 | 593 | 888 | 304 | 650 | 667 | 600 | 470 | 773 | 786 | 809 |
| | (c) Transport & Communication | 692 | 668 | 656 | 526 | 667 | 694 | 603 | 577 | 762 | 494 | 618 |
| | (d) Personal Care & effects | 376 | 404 | 444 | 394 | 506 | 360 | 385 | 446 | 444 | 356 | 376 |
| | (e) Others | 445 | 474 | 546 | 571 | 398 | 374 | 373 | 586 | 349 | 582 | 360 |
| | Miscellaneous Group | 509 | 548 | 587 | 444 | 504 | 436 | 460 | 515 | 530 | 519 | 457 |
| | GENERAL INDEX | 503 | 547 | 590 | 547 | 512 | 495 | 523 | 581 | 483 | 592 | 438 |
| | To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

for Director.

**GOVERNMENT OF INDIA**

**MINISTRY OF LABOUR**

**LABOUR BUREAU**

**Consumer Price Index Numbers for Industrial Workers (Base 2001-100)**

**MONTH : APRIL 2012**

| Group/Sub-group/Centre | Bangalore | Belgaum | Hubli-Dharwar | Mercara | Mysore |
|---|---|---|---|---|---|
| **Food** | | | | | |
| (i) Cereals & Products | 194 | 223 | 222 | 165 | 184 |
| (j) Pulses and & Products | 211 | 210 | 227 | 228 | 215 |
| (k) Oils & Fats | 227 | 241 | 239 | 231 | 233 |
| (l) Meat, Fish & Eggs | 267 | 290 | 279 | 233 | 273 |
| (m) Milk & Products | 220 | 222 | 195 | 213 | 234 |
| (n) Condiments & Spices | 209 | 188 | 220 | 206 | 196 |
| (o) Vegetables & Fruits | 265 | 314 | 285 | 261 | 258 |
| (p) Other Food | 237 | 228 | 221 | 215 | 219 |
| **FOOD GROUP** | 225 | 236 | 229 | 206 | 219 |
| Pan, Supari, Tobacco & Intoxicant | 195 | 203 | 195 | 166 | 265 |
| Fuel and Light | 159 | 185 | 172 | 340 | 176 |
| Housing Index | 208 | 206 | 244 | 101 | 220 |
| Clothing, Bedding and Footwear | 136 | 162 | 142 | 164 | 158 |
| Miscellaneous | | | | | |
| (f) Medical care | 205 | 186 | 164 | 177 | 165 |
| (g) Education, Recreation & Amusemen | 176 | 158 | 173 | 167 | 118 |
| (h) Transport and Communication | 267 | 236 | 249 | 194 | 212 |

| | | | | | |
|---|---|---|---|---|---|
| (i) Personal Care & Effects | 196 | 179 | 191 | 178 | 188 |
| (j) Others | 206 | 182 | 175 | 195 | 201 |
| Miscellaneous Group | 216 | 188 | 191 | 182 | 173 |
| GENERAL INDEX | 209 | 213 | 213 | 198 | 203 |

**P.R. 836**

**P. N. KAUNDAL,**
**ECONOMIC OFFICER**

## ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು

**ವಿಷಯ :** 2011ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡ ಭಾಷಾ ವಿಷಯದ ಪರೀಕ್ಷೆಯಲ್ಲಿ ದುರಾಚಾರ ಎಸಗಿರುವ ಪ್ರಕರಣಕ್ಕೆ ಸಂಬಂಧಿಸಿದಂತೆ ಅಭ್ಯರ್ಥಿಗಳಾದ ಶ್ರೀ ಕೆ. ಸತ್ಯನಾರಾಯಣ (ನೋಂದಣಿ ಸಂಖ್ಯೆ–36028_ ಮತ್ತು ಶ್ರೀ ಎನ್. ಎಸ್. ಯೋಗೇಶ್ (ನೋಂದಣಿ ಸಂಖ್ಯೆ : 36120) ಇವರುಗಳಿಗೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ :** (1) ಶ್ರೀ ಕೆ. ಸತ್ಯನಾರಾಯಣ, (ನೋಂದಣಿ ಸಂಖ್ಯೆ : 36028) ಮತ್ತು ಶ್ರೀ ಎನ್. ಎಸ್. ಯೋಗೇಶ್ (ನೋಂದಣಿ ಸಂಖ್ಯೆ : 36120) ಇವರುಗಳಿಗೆ ಆಯೋಗದ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ ಸಂಖ್ಯೆ : ಇಪ (3) 385–386/2011–12/ಪಿಎಸ್‌ಸಿ, ದಿನಾಂಕ : 06–02–2012.

(2) ಆಪಾದಿತರ ಲಿಖಿತ ಸಮಜಾಯಿಷಿಗಳ ದಿನಾಂಕ : 08–02–2012.

(3) ಆಯೋಗದ ಆದೇಶ ಸಂಖ್ಯೆ ಆಡಳಿತ 2153/2011–12/ಪಿಎಸ್‌ಸಿ, ದಿನಾಂಕ : 14–03–2012.

(4) ವಿಚಾರಣಾಧಿಕಾರಿಯವರ ವರದಿ ದಿನಾಂಕ : 26–04–2012.

(5) ಆಯೋಗದ ನಡಾವಳಿ ದಿನಾಂಕ : 24–05–2012.

**ಪ್ರಸ್ತಾವನೆ :–**

ಆಯೋಗವು ನಡೆಸಿದ 2011ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ದಿನಾಂಕ : 07–01–2011ರಂದು ನಡೆಸಲಾದ ಕನ್ನಡಭಾಷಾ ವಿಷಯದ ಪರೀಕ್ಷೆಯ ಉತ್ತರ ಪತ್ರಿಕೆಗಳನ್ನು ನಾಮಿನಲ್–ರೋಲ್ ನೊಂದಿಗೆ ತಾಳೆಮಾಡುವ ಸಂದರ್ಭದಲ್ಲಿ ನೋಂದಣಿ ಸಂಖ್ಯೆ : 36028ರ ಅಭ್ಯರ್ಥಿ ಶ್ರೀ ಕೆ. ಸತ್ಯನಾರಾಯಣ, ಸಶಸ್ತ್ರ ಪೊಲೀಸ್ ಪೇದೆ–03, ಜಿಲ್ಲಾ ಸಶಸ್ತ್ರ ಮೀಸಲು ಪೊಲೀಸ್ ಕಛೇರಿ, ಚಿಕ್ಕಬಳ್ಳಾಪುರ ಜಿಲ್ಲೆ–562 101 ಮತ್ತು ನೋಂದಣಿ ಸಂಖ್ಯೆ : 36120ರ ಅಭ್ಯರ್ಥಿ ಶ್ರೀ ಎನ್. ಎಸ್. ಯೋಗೇಶ್, ಸಶಸ್ತ್ರ ಪೊಲೀಸ್ ಪೇದೆ–25, ಜಿಲ್ಲಾ ಸಶಸ್ತ್ರ ಮೀಸಲು ಪೊಲೀಸ್ ಕಛೇರಿ ಚಿಕ್ಕಬಳ್ಳಾಪುರ, ಎಪಿಎಂಸಿ ಯಾರ್ಡ್, ಚಿಕ್ಕಬಳ್ಳಾಪುರ ಜಿಲ್ಲೆ–562 101 ಇವರುಗಳು ಪರೀಕ್ಷಾ ಸಂದರ್ಭದಲ್ಲಿ ಉತ್ತರಪತ್ರಿಕೆಗಳನ್ನು ಅದಲು ಬದಲು ಮಾಡಿಕೊಂಡು ನೋಂದಣಿ ಸಂಖ್ಯೆಗಳನ್ನು ತಿದ್ದುಪಡಿ ಮಾಡಿರುವುದು ಕಂಡುಬಂದಿರುವುದಾಗಿ ದಿನಾಂಕ : 12–01–2012ರಂದು ರಹಸ್ಯ ಶಾಖೆಯವರು ಲಿಖಿತ ವರದಿಯನ್ನು ಮಾಡಿರುತ್ತಾರೆ. ಈ ವರದಿಯ ಹಿನ್ನೆಲೆಯಲ್ಲಿ ಮೇಲಿನ ಅಭ್ಯರ್ಥಿಗಳ ಫಲಿತಾಂಶವನ್ನು ತಡೆಹಿಡಿಯಲಾಗಿತ್ತು.

ನಂತರ ಉಲ್ಲೇಖ–(1)ರಲ್ಲಿ ಓದಲಾದ ದಿನಾಂಕ : 06–02–2012ರ ಆಯೋಗದ ಕಾರಣ ಕೇಳುವ ನೋಟೀಸ್‌ಗಳಲ್ಲಿ ಅಭ್ಯರ್ಥಿಗಳಿಂದ ಈ ಆರೋಪದ ಬಗ್ಗೆ ಸೂಕ್ತ ಲಿಖಿತ ಸಮಜಾಯಿಷಿ ಕೇಳಲಾಗಿತ್ತು. ಈ ಕಾರಣ ಕೇಳುವ ನೋಟೀಸುಗಳಿಗೆ ಉಲ್ಲೇಖ–(2)ರಲ್ಲಿ ಓದಲಾದ ದಿನಾಂಕ : 08–02–2012ರಂದು ಅಭ್ಯರ್ಥಿಗಳು ತಮ್ಮ ಲಿಖಿತ ಸಮಜಾಯಿಷಿಗಳನ್ನು ನೀಡಿರುತ್ತಾರೆ. ಈ ಲಿಖಿತ ಸಮಜಾಯಿಷಿಗಳು ಸಮಂಜಸವಾಗಿರದ ಕಾರಣ ಇವರ ಮೇಲಿನ ಆರೋಪದ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಉಲ್ಲೇಖ–(3)ರಲ್ಲಿ ಓದಲಾದ ದಿನಾಂಕ : 14–03–2012ರ ಆದೇಶದಲ್ಲಿ ಆಯೋಗದಿಂದ ವಿಚಾರಣಾಧಿಕಾರಿಗಳನ್ನು ನೇಮಿಸಿ ವಿಚಾರಣೆ ನಡೆಸಲಾಗಿರುತ್ತದೆ. ಉಲ್ಲೇಖ (4)ರಲ್ಲಿ ಓದಲಾದ ದಿನಾಂಕ : 26–04–2012ರಂದು ವಿಚಾರಣಾಧಿಕಾರಿಯವರು ಸಲ್ಲಿಸಿದ್ದ ವಿಚಾರಣಾ ವರದಿಯಲ್ಲಿ ಇವರುಗಳ ಮೇಲಿನ ಆರೋಪವು ಸಾಬೀತಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳು, 1965ರ ನಿಯಮ 14ರನ್ವಯ ಹಾಗೂ ತತ್ಸಂಬಂಧದಲ್ಲಿ ಜಾರಿಗೊಳಿಸಲಾದ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ : ಆಡಳಿತ 398/1993–94/ಪಿಎಸ್‌ಸಿ, ದಿನಾಂಕ : 14–07–1993ರನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಅಭ್ಯರ್ಥಿಗಳಾದ ಶ್ರೀ ಕೆ. ಸತ್ಯನಾರಾಯಣ (ನೋಂದಣಿ ಸಂಖ್ಯೆ : 36028) ಮತ್ತು ಶ್ರೀ ಎನ್. ಎಸ್. ಯೋಗೇಶ್ (ನೋಂದಣಿ ಸಂಖ್ಯೆ 36120) ಇವರುಗಳಿಗೆ 2011ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ಎರಡು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಹಾಜರಾಗದಂತೆ ಡಿಬಾರ್ ಮಾಡುವ ದಂಡನೆ ವಿಧಿಸುವುದು ಸೂಕ್ತವೆಂದು ಉಲ್ಲೇಖ (5)ರಲ್ಲಿ ಓದಲಾದ ದಿನಾಂಕ : 24–05–2012ರಂದು ಆಯೋಗವು ನಿರ್ಣಯಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ : ಇಪ (3) 80/2012–13/ಪಿಎಸ್‌ಸಿ, ಬೆಂಗಳೂರು, ದಿನಾಂಕ : 14–06–2012**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳು, 1965ರ ನಿಯಮ 14 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಸಂಖ್ಯೆ : ಆಡಳಿತ : 398/1993–94/ಪಿಎಸ್‌ಸಿ, ದಿನಾಂಕ : 14–07–1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಸಂಖ್ಯೆ : 36028ರ ಅಭ್ಯರ್ಥಿ ಶ್ರೀ ಕೆ. ಸತ್ಯನಾರಾಯಣ, ಸಶಸ್ತ್ರ ಪೊಲೀಸ್ ಪೇದೆ–03, ಜಿಲ್ಲಾ ಸಶಸ್ತ್ರ ಮೀಸಲು ಪೊಲೀಸ್ ಕಛೇರಿ, ಚಿಕ್ಕಬಳ್ಳಾಪುರ ಜಿಲ್ಲೆ–562101 ಮತ್ತು ನೋಂದಣಿ ಸಂಖ್ಯೆ : 36120ರ ಅಭ್ಯರ್ಥಿ ಶ್ರೀ ಎನ್. ಎಸ್. ಯೋಗೇಶ್, ಸಶಸ್ತ್ರ ಪೊಲೀಸ್ ಪೇದೆ–25, ಜಿಲ್ಲಾ ಸಶಸ್ತ್ರ ಮೀಸಲು ಪೊಲೀಸ್ ಕಛೇರಿ, ಚಿಕ್ಕಬಳ್ಳಾಪುರ, ಎಪಿಎಂಸಿ ಯಾರ್ಡ್, ಚಿಕ್ಕಬಳ್ಳಾಪುರ ಜಿಲ್ಲೆ–562101, ಇವರುಗಳ ವಿರುದ್ಧದ ಆರೋಪವು ಸಾಬೀತಾಗಿರುವುದರಿಂದ ಈ ಅಭ್ಯರ್ಥಿಗಳ 2011ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗವು ನಡೆಸುವ ಮುಂದಿನ ಎರಡು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಹಾಜರಾಗದಂತೆ ಡಿಬಾರ್ ಮಾಡುವ ದಂಡನೆ ವಿಧಿಸಿದೆ.

**ವಿ. ಬಿ. ಪಾಟೀಲ್,**
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

**ಪಿ.ಆರ್. 835**

**ಭಾಷಾಂತರ ನಿರ್ದೇಶನಾಲಯ, ಪೋಡಿಯಂ ಬ್ಲಾಕ್, ನೆಲಮಹಡಿ, ವಿಶ್ವೇಶ್ವರಯ್ಯ ಕೇಂದ್ರ**

**ಡಾ|| ಬಿ. ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು–1.**

**ಅಧಿಕೃತ ಜ್ಞಾಪನ**

**ಸಂಖ್ಯೆ : ಭಾನಿ/25/ಆಡಳಿತ/ಮುಂಬಡ್ತಿ/2012, ಬೆಂಗಳೂರು, ದಿನಾಂಕ : 06–06–2012.**

ಭಾಷಾಂತರ ನಿರ್ದೇಶನಾಲಯದ ಈ ಕೆಳಕಂಡ ಭಾಷಾಂತರಕಾರರ ವೃಂದದ ಅಧಿಕಾರಿಗಳಿಗೆ ಭಾಷಾಂತರ ನಿರ್ದೇಶನಾಲಯದ ಅಧಿಕೃತ ಜ್ಞಾಪನ ಸಂಖ್ಯೆ ಭಾನಿ 26/ಆಡಳಿತ/ಗ್ರೂಪ್‌ಬಿ/ಜ್ಯೇಪ/2012 ದಿನಾಂಕ : 21–01–2012ರ ಜ್ಯೇಷ್ಠತಾಪಟ್ಟಿಯ ಮೇರೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವೇತನ ಶ್ರೇಣಿ ರೂ. 22,800–43,200 ರ ಸಂಶೋಧನಾಧಿಕಾರಿ ಹುದ್ದೆಗಳಿಗೆ ಸ್ಥಾನಪನ್ನ ಬಡ್ತಿ ನೀಡಿ ಅವರುಗಳ ಹೆಸರುಗಳ ಮುಂದೆ ನಮೂದಿಸಿರುವ ಹುದ್ದೆಗಳಲ್ಲಿ ಸ್ಥಳ ನಿಯುಕ್ತಿಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿ ಹೆಸರು ಮತ್ತು ಪ್ರಸ್ತುತ ಹುದ್ದೆ ಶ್ರೀ/ಶ್ರೀಮತಿ | ಬಡ್ತಿ ನೀಡಿ ನೇಮಿಸಲಾದ ಹುದ್ದೆ |
|---|---|---|
| 1 | ಎಂ. ಆರ್. ವೆಂಕಟರಮಣ, ಭಾಷಾಂತರಕಾರರು (ಕನ್ನಡ), ಭಾಷಾಂತರ ನಿರ್ದೇಶನಾಲಯ | ಶ್ರೀ ಹೆಚ್. ವೂಲೆಪ್ಪ, ಸಂಶೋಧನಾಧಿಕಾರಿ ಇವರನ್ನು ಕರ್ನಾಟಕ ಕಾನೂನು ವರದಿ ಪರಿಷತ್‌ಗೆ ನಿಯೋಜಿಸಿದ್ದರಿಂದ ತೆರವಾದ ಹುದ್ದೆ. |
| 2 | ಅಬ್ದುಲ್ ಗಫಾರ್, ಭಾಷಾಂತರಕಾರರು (ಕನ್ನಡ), ಭಾಷಾಂತರ ನಿರ್ದೇಶನಾಲಯ (ಪ್ರಸ್ತುತ ಕರ್ನಾಟಕ ವಿಧಾನಪರಿಷತ್ ಸಚಿವಾಲಯ ಇಲ್ಲಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿರುವ). | ಶ್ರೀ ರಂಗನಾಥ, ಸಂಶೋಧನಾಧಿಕಾರಿ ಇವರನ್ನು ಕರ್ನಾಟಕ ಕಾನೂನು ವರದಿ ಪರಿಷತ್‌ಗೆ ನಿಯೋಜಿಸಿದ್ದರಿಂದ ತೆರವಾದ ಹುದ್ದೆ. |
| 3 | ಆರ್. ಎಸ್. ಗೀತಾ, ಭಾಷಾಂತರಕಾರರು (ಕನ್ನಡ), ಭಾಷಾಂತರ ನಿರ್ದೇಶನಾಲಯ | ಶ್ರೀ ಸಿ. ಎಂ. ಪ್ರಭುದೇವ, ಸಂಶೋಧನಾಧಿಕಾರಿ ಇವರಿಗೆ ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡಿದ್ದರಿಂದ ತೆರವಾದ ಹುದ್ದೆ. |
| 4 | ಕೆ. ಸಿ. ಕೃಷ್ಣಮೂರ್ತಿ, ಭಾಷಾಂತರಕಾರರು (ಕನ್ನಡ), ಭಾಷಾಂತರ ನಿರ್ದೇಶನಾಲಯ. | ಶ್ರೀ ಭಕ್ತರಾಜ ಪಾಟೀಲ್, ಸಂಶೋಧನಾದಿಕಾರಿ ಇವರನ್ನು ಕರ್ನಾಟಕ ವಿಧಾನಸಭೆಗೆ ನಿಯೋಜಿಸಿದ್ದರಿಂದ ತೆರವಾದ ಹುದ್ದೆ. |

**ಪಿ.ಆರ್. 794**

**ನಿರ್ದೇಶಕರು**

**GOVERNMENT OF KARNATAKA**

**DIRECTORATE OF ECONOMICS AND STATISTICS**

**BANGALORE-1**

**Consumer Price Index Numbers for Industrial Workers**

**No. DES 38 PWX 2012** **Month : March 2012,**

**State : Karnataka** **Base : 1987-88=100** **Date : 26-05-2012**

| | Group/Sub-Group | Bell-ary | Bhad-ra-vathi | Da-van-gere | Dan-deli | Gul-bar-ga | Hari-har | Has-san | Man-dya | Man-ga-lore | Rai-chur | Tum kur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:** | | | | | | | | | | | |
| | (a) Cereals & Products | 757 | 650 | 779 | 692 | 806 | 709 | 617 | 695 | 621 | 833 | 609 |
| | (b) Pulses & Products | 566 | 661 | 676 | 736 | 599 | 624 | 659 | 686 | 632 | 651 | 643 |
| | (c) Oil & Fats | 368 | 394 | 388 | 406 | 434 | 410 | 382 | 431 | 281 | 415 | 420 |
| | (d) Meat, Fish & Eggs | 775 | 832 | 874 | 734 | 905 | 807 | 722 | 865 | 638 | 1016 | 715 |
| | (e) Milk & Products | 532 | 536 | 693 | 630 | 564 | 639 | 546 | 658 | 615 | 581 | 518 |
| | (f) Condiments & Spices | 420 | 530 | 770 | 818 | 438 | 474 | 565 | 619 | 548 | 644 | 520 |
| | (g) Vegetables & Fruits | 566 | 661 | 746 | 824 | 575 | 617 | 758 | 727 | 656 | 568 | 852 |
| | (h) Other Food | 493 | 790 | 640 | 648 | 578 | 502 | 609 | 564 | 490 | 504 | 528 |
| | **FOOD GROUP INDEX** | 611 | 648 | 715 | 682 | 653 | 614 | 611 | 679 | 572 | 696 | 595 |
| II | Pan, Supari, Tobacco & Intoxicants | 536 | 789 | 757 | 493 | 480 | 713 | 632 | 552 | 431 | 552 | 695 |
| III | Fuel & Light | 480 | 454 | 589 | 645 | 526 | 541 | 533 | 622 | 409 | 657 | 403 |
| IV. | Housing | 100 | 100 | 100 | lOO | lOO | lOO | 100 | lOO | 100 | 100 | lOO |
| V. | Clothing, Bedding & Footwear | 281 | 480 | 384 | 391 | 367 | 324 | 447 | 625 | 309 | 639 | 234 |
| VI. | Miscellaneous: | | | | | | | | | | | |
| | (a) Medical Care | 663 | 914 | 494 | 457 | 359 | 277 | 463 | 552 | 354 | 429 | 262 |
| | (b) Education, Recreation & Amusement | 567 | 593 | 888 | 304 | 650 | 667 | 600 | 470 | 773 | 786 | 809 |
| | (c) Transport & Communication | 692 | 668 | 656 | 526 | 667 | 694 | 603 | 577 | 762 | 494 | 618 |
| | (d) Personal Care & effects | 376 | 406 | 446 | 394 | 456 | 361 | 365 | 442 | 445 | 356 | 376 |
| | (e) Others | 442 | 474 | 546 | 571 | 398 | 369 | 373 | 567 | 349 | 582 | 360 |
| | Miscellaneous Group | 502 | 548 | 587 | 444 | 492 | 435 | 453 | 507 | 531 | 519 | 457 |
| | GENERAL INDEX | 497 | 540 | 583 | 542 | 510 | 487 | 516 | 574 | 483 | 590 | 435 |
| | To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

for Director.

**GOVERNMENT OF INDIA**

**MINISTRY OF LABOUR**

**LABOUR BUREAU**

**Consumer Price Index Numbers for Industrial Workers (Base 2001-100)**

**MONTH : MARCH 2012**

| Group/Sub-group/Centre | Bangalore | Belgaum | Hubli-Dharwar | Mercara | Mysore |
|---|---|---|---|---|---|
| Food | | | | | |
| (q) Cereals & Products | 182 | 238 | 226 | 166 | 173 |
| (r) Pulses and & Products | 209 | 210 | 229 | 225 | 216 |
| (s) Oils & Fats | 220 | 241 | 235 | 228 | 213 |
| (t) Meat, Fish & Eggs | 261 | 292 | 282 | 231 | 280 |
| (u) Milk & Products | 220 | 222 | 195 | 213 | 234 |
| (v) Condiments & Spices | 208 | 188 | 207 | 202 | 198 |
| (w) Vegetables & Fruits | 245 | 294 | 243 | 233 | 241 |
| (x) Other Food | 237 | 228 | 220 | 213 | 217 |
| FOOD GROUP | 218 | 238 | 226 | 202 | 214 |
| Pan, Supari, Tobacco & Intoxicant | 195 | 210 | 198 | 167 | 206 |
| Fuel and Light | 158 | 185 | 172 | 339 | 176 |
| Housing Index | 208 | 206 | 244 | 101 | 220 |
| Clothing, Bedding and Footwear | 131 | 163 | 140 | 164 | 164 |
| Miscellaneous | | | | | |
| (k) Medical care | 205 | 186 | 164 | 177 | 163 |
| (l) Education, Recreation & Amusemen | 176 | 158 | 173 | 167 | 118 |
| (m) Transport and Communication | 266 | 236 | 249 | 194 | 210 |
| (n) Personal Care & Effects | 205 | 180 | 190 | 177 | 191 |
| (o) Others | 205 | 182 | 175 | 194 | 189 |
| Miscellaneous Group | 217 | 188 | 190 | 181 | 172 |
| GENERAL INDEX | 206 | 215 | 212 | 196 | 199 |

**P.R. 796**

**P. N. KAUNDAL,**
**ECONOMIC OFFICER**

**ಭಾಷಾಂತರ ನಿರ್ದೇಶನಾಲಯ, ಪೋಡಿಯಂ ಬ್ಲಾಕ್, ನೆಲಮಹಡಿ, ವಿಶ್ವೇಶ್ವರಯ್ಯ ಕೇಂದ್ರ**
**ಡಾ॥ ಬಿ. ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು–1.**

**ಅಧಿಕೃತ ಜ್ಞಾಪನ**

**ಸಂಖ್ಯೆ : ಭಾನಿ/25/ಆಡಳಿತ/ಮುಂಬಡ್ತಿ/2012, ಬೆಂಗಳೂರು, ದಿನಾಂಕ : 06–06–2012.**

ಭಾಷಾಂತರ ನಿರ್ದೇಶನಾಲಯದಲ್ಲಿ ಶೀಘ್ರಲಿಪಿಗಾರರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಎಸ್. ಭಾಗ್ಯಲಕ್ಷ್ಮಿ, ಅವರಿಗೆ ಭಾಷಾಂತರ ನಿರ್ದೇಶನಾಲಯದ ಅಧಿಕೃತ ಜ್ಞಾಪನ ಸಂಖ್ಯೆ ಭಾನಿ 36/ಆಡಳಿತ/ಗ್ರೂಪ್ ಸಿ, ಡಿ/ಜ್ಯೇಪ/2012 ದಿನಾಂಕ : 16–05–2012ರ ಜ್ಯೇಷ್ಠತಾಪಟ್ಟಿಯ ಮೇರೆಗೆ

ಶ್ರೀಮತಿ ಹೆಚ್. ನಾಗರತ್ನ, ನಿರ್ದೇಶಕರ ಗೆಜೆಟೆಡ್ ಆಪ್ತ ಸಹಾಯಕರು ಇವರ ವಯೋನಿವೃತ್ತಿಯಿಂದ ತೆರವಾದ ನಿರ್ದೇಶಕರ ಗೆಜೆಟೆಡ್ ಆಪ್ತ ಸಹಾಯಕರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವೇತನ ಶ್ರೇಣಿ ರೂ. 21,600–40,050ರಲ್ಲಿ ಸ್ಥಾನಪನ್ನ ಬಡ್ತಿ ನೀಡಲಾಗಿದೆ.

**ಪಿ.ಆರ್. 795** **ನಿರ್ದೇಶಕರು**

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

## ಕಾರ್ಯನಿರ್ವಾಹಕ ಅಭಿಯಂತರರು (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ., ಬಳ್ಳಾರಿ.

## ಪ್ರಕಟಣೆ

**ಸಂಖ್ಯೆ : ಕಾನಿಅ(ವಿ)/ಬೃಕಾವಿ/ಬ/ಸಕಾನಿಅ(ಕಾ)/2012–13/435–39, ದಿನಾಂಕ : 01ನೇ ಜೂನ್, 2012.**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ವಿದ್ಯುತ್ ಸರಬರಾಜು ಕಾಯಿದೆ 2003ರ ಸೆಕ್ಷನ್ 67ರ ಅಡಿಯಲ್ಲಿ ಯೋಜನೆಗಳನ್ನು ರೂಪಿಸಿದೆ ಮತ್ತು ಇದೇ ಕಾಯಿದೆ ಸೆಕ್ಷನ್ 67(2)ರ ಅನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಪ್ರಕಟಣೆಯನ್ನು ಪ್ರಕಟಿಸಲಾಗಿದೆ. ಯೋಜನೆಗಳ ವಿವರಗಳು ಈ ಕೆಳಕಂಡಂತಿವೆ.

**1. ಯೋಜನೆಯ ಹೆಸರು :**–66/11 ಕೆ.ವಿ. ಬಾಚಿಗೊಂಡನಹಳ್ಳಿ ವಿದ್ಯುತ್ ವಿತರಣಾ ಕೇಂದ್ರ ಸ್ಥಾಪನೆ : 66 ಕೆ.ವಿ. ಮುನಿರಾಬಾದ್–ಇಟ್ಟಗಿ ವಿದ್ಯುತ್ ಮಾರ್ಗದಿಂದ ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಉದ್ದೇಶಿತ 66 ಕೆ.ವಿ. ಬಾಚಿಗೊಂಡನಹಳ್ಳಿ ವಿದ್ಯುತ್ ವಿತರಣಾ ಕೇಂದ್ರಕ್ಕೆ 66 ಕೆ.ವಿ. ಒಂಟಿ ವಿದ್ಯುತ್ ಮಾರ್ಗ ನಿರ್ಮಾಣ. ಉದ್ದೇಶ : ಬಾಚಿಗೊಂಡನಹಳ್ಳಿ ಹಾಗೂ ಸುತ್ತ–ಮುತ್ತಲಿನ ಪ್ರದೇಶದ ವೋಲ್ಟೋಜ್ ಸ್ಥಿತಿ ಉತ್ತಮ ಪಡಿಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ. **ವಿದ್ಯುತ್** ಮಾರ್ಗವು ಹಾದು ಹೋಗುವ ಹಳ್ಳಿಗಳು : ಆನಂದದೇವನಹಳ್ಳಿ, ಬ್ಯಾಲಾಳು, ಕಡಲಬಾಳು, ಮತ್ತು ಬಾಚಿಗೊಂಡನಹಳ್ಳಿ. ಯೋಜನೆಯ ಅಂದಾಜು ಮೊತ್ತ ರೂ. 600.00 ಲಕ್ಷಗಳು.

**2. ಯೋಜನೆಯ ಹೆಸರು :**–66/11 ಕೆ.ವಿ. ಹರವಿ ವಿದ್ಯುತ್ ವಿತರಣಾ ಕೇಂದ್ರ ಸ್ಥಾಪನೆ : 66/11 ಕೆ.ವಿ. ಹಲವಾಗಲು ವಿದ್ಯುತ್ ಉಪ–ಕೇಂದ್ರದಿಂದ ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕಿನ ಉದ್ದೇಶಿತ 66/11 ಕೆ.ವಿ. ಹರವಿ ವಿದ್ಯುತ್ ವಿತರಣಾ ಕೇಂದ್ರಕ್ಕೆ 66 ಕೆ.ವಿ. ಒಂಟಿ ವಿದ್ಯುತ್ ಮಾರ್ಗ ನಿರ್ಮಾಣ. ಉದ್ದೇಶ : ಹರವಿ ಹಾಗೂ ಸುತ್ತ–ಮುತ್ತಲಿನ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮ ಪಡಿಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ. **ವಿದ್ಯುತ್ ಮಾರ್ಗವು ಹಾದು ಹೋಗುವ ಹಳ್ಳಿಗಳು** : ಹಲವಾಗಲು, ಕಣವಿ ಮತ್ತು ಹರವಿ. ಯೋಜನೆಯ ಅಂದಾಜು ಮೊತ್ತ ರೂ. 600.00 ಲಕ್ಷಗಳು.

**3. ಯೋಜನೆಯ ಹೆಸರು :**–110/11 ಕೆ.ವಿ. ಮೆಟ್ರಿ (ದೇವಲಾಪುರ) ವಿದ್ಯುತ್ ವಿತರಣಾ ಕೇಂದ್ರ ಸ್ಥಾಪನೆ : 110 ಕೆ.ವಿ. ಮುನಿರಾಬಾದ್–ಹಗರಿ ವಿದ್ಯುತ್ ಮಾರ್ಗದಿಂದ ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕಿನ ಉದ್ದೇಶಿತ 110 ಕೆ.ವಿ. ಮೆಟ್ರಿ (ದೇವಲಾಪುರ) ವಿದ್ಯುತ್ ವಿತರಣಾ ಕೇಂದ್ರಕ್ಕೆ 110 ಕೆ.ವಿ. ಒಂಟಿ ವಿದ್ಯುತ್ ಮಾರ್ಗ ನಿರ್ಮಾಣ, **ಉದ್ದೇಶ :** ಮೆಟ್ರಿ (ದೇವಲಾಪುರ) ಹಾಗೂ ಸುತ್ತ ಮುತ್ತಲಿನ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮ ಪಡಿಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ, **ವಿದ್ಯುತ್ ಮಾರ್ಗವು ಹಾದು ಹೋಗುವ ಹಳ್ಳಿಗಳು :** ಹಳೆದರೋಜಿ, ಮೆಟ್ರಿ ಮತ್ತು ದೇವಲಾಪುರ ಗ್ರಾಮಗಳು. ಯೋಜನೆಯ ಅಂದಾಜು ಮೊತ್ತ ರೂ. 500.00 ಲಕ್ಷಗಳು.

**4. ಯೋಜನೆಯ ಹೆಸರು :**–66 ಕೆ.ವಿ. ಹೊಸಹಳ್ಳಿ–ಹಿರೆಮಲ್ಲನಹೊಳೆ ವಿದ್ಯುತ್ ಮಾರ್ಗ ನಿರ್ಮಾಣ : ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ, 66 ಕೆ.ವಿ. ಹೊಸಹಳ್ಳಿ ವಿದ್ಯುತ್ ವಿತರಣಾ ಕೇಂದ್ರದಿಂದ ಚಿತ್ರದುರ್ಗ ಜಿಲ್ಲೆಯ 66 ಕೆ.ವಿ. ಹಿರೇಮಲ್ಲನಹೊಳೆ ವಿದ್ಯುತ್ ವಿತರಣಾ ಕೇಂದ್ರಕ್ಕೆ 66 ಕೆ.ವಿ. ಒಂಟಿ ವಿದ್ಯುತ್ ಮಾರ್ಗ ನಿರ್ಮಾಣ. **ಉದ್ದೇಶ :** 66 ಕೆ.ವಿ. ಹೊಸಹಳ್ಳಿ ವಿದ್ಯುತ್ ವಿತರಣಾ ಕೇಂದ್ರಕ್ಕೆ ಪರ್ಯಾಯ ವಿದ್ಯುತ್ ವ್ಯವಸ್ಥೆಯನ್ನು ಕಲ್ಪಿಸುವ ಸಲುವಾಗಿ. **ವಿದ್ಯುತ್ ಮಾರ್ಗವು ಹಾದು ಹೋಗುವ ಹಳ್ಳಿಗಳು :** ಹೊಸಹಳ್ಳಿ, ವೀರಗೊಂಡನಹಳ್ಳಿ ಸಕಲಾಪುರ, ಗೊಲ್ಲರಹಟ್ಟಿ, ಆಲೂರು, ಹುಚ್ಚವ್ವನಹಳ್ಳಿ ಮತ್ತು ಹಿರೇಮಲ್ಲನಹೊಳೆ. ಯೋಜನೆಯ ಅಂದಾಜು ಮೊತ್ತ ರೂ. 400.00 ಲಕ್ಷಗಳು.

**5. ಯೋಜನೆಯ ಹೆಸರು :**–ಬಳ್ಳಾರಿ ಜಿಲ್ಲೆ, ಸಿರುಗುಪ್ಪ ತಾಲ್ಲೂಕಿನ 110 ಕೆ.ವಿ. ತೆಕ್ಕಲಕೋಟೆ ವಿದ್ಯುತ್ ವಿತರಣಾ ಕೇಂದ್ರಕ್ಕೆ 110 ಕೆ.ವಿ. ಕುರುಗೋಡು ವಿದ್ಯುತ್ ಮಾರ್ಗದಿಂದ 110 ಕೆ.ವಿ. ಒಂಟಿ ವಿದ್ಯುತ್ ಮಾರ್ಗ ನಿರ್ಮಾಣ. ಉದ್ದೇಶ : 110 ಕೆ.ವಿ. ತೆಕ್ಕಲಕೋಟೆ ವಿದ್ಯುತ್ ವಿತರಣಾ ಕೇಂದ್ರಕ್ಕೆ ಪರ್ಯಾಯ ವಿದ್ಯುತ್ ವ್ಯವಸ್ಥೆಯನ್ನು ಕಲ್ಪಿಸುವ ಸಲುವಾಗಿ. **ವಿದ್ಯುತ್ ಮಾರ್ಗವು ಹಾದು ಹೋಗುವ ಹಳ್ಳಿಗಳು :** ಬಾದನಹಟ್ಟಿ, ಕುರುಗೋಡು, ಬೈಲೂರು, ಸಿಂದಿಗೆರೆ, ಶಾನವಾಸಪುರ, ಕೊಂಚಿಗೆರೆ, ದಾಸಪುರ, ಸಿರಿಗೇರಿ, ದೇವಿನಗರ ಮತ್ತು ತೆಕ್ಕಲಕೋಟೆ, ಯೋಜನೆಯ ಅಂದಾಜು ಮೊತ್ತ ರೂ. 546.00 ಲಕ್ಷಗಳು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಮೇಲೆ ತಿಳಿಸಿದ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಭಾಗ–3 (ಕೇಂದ್ರಿಯ ಕಾಯ್ದೆ 1885ರ 13 ಅನ್ವಯ) ಅಧಿನಿಯಮ ಟೆಲಿಗ್ರಾಫ್ ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ ಹಾಗೂ

